

# ಬಂಡೆಪ್ಪ ಖೂಬಾ ಅವರ ಬದುಕು-ಬರಹ

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ,
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)


ಸಂಶೋಧಕರು

**ಬಸವರಾಜ ಸಿದ್ರಾಮಪ್ಪ**

ಮಾರ್ಗದರ್ಶಕರು

**ಡಾ. ಸೋಮನಾಥ ಯಾಳವಾರ**

ಕ.ರಾ.ಶಿ. ಸಂಸ್ಥೆಯ
ಸ್ನಾತಕೋತ್ತಳ ಕನ್ನಡ ಸಂಶೋಧನ ಕೇಂದ್ರ, ಬೀದರ.







**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ - ೫೮೩ ೨೭೬

ಡಿಸೆಂಬರ್ ೨೦೦೫

338



# ಬಂಡೆಪ್ಪ ಖೂಬಾ ಅವರ ಬದುಕು-ಬರಹ

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ,
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)




ಸಂಶೋಧಕರು

**ಬಸವರಾಜ ಸಿದ್ರಾಮಪ್ಪ**





ಮಾರ್ಗದರ್ಶಕರು

**ಡಾ. ಸೋಮನಾಥ ಯಾಳವಾರ**

ಕ.ರಾ.ಶಿ. ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ.







**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ – ೫೮೩ ೨೭೬

ಡಿಸೆಂಬರ್ ೨೦೦೫

338

# ಪ್ರಮಾಣ ಪತ್ರ

**'ಬಂಡೆಪ್ಪ ಖೂಬಾ ಅವರ ಬದುಕು-ಬರಹ'** ಎಂಬ ನಿಬಂಧವನ್ನು ಡಾ. ಸೋಮನಾಥ ಯಾಳವಾರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಬೀದರ

ದಿನಾಂಕ: ೧೫-೧೨-೨೦೦೫

ಬಸವರಾಜ ಸಿದ್ರಾಮಪ್ಪ

ಎಂ.ಫಿಲ್ ವಿದ್ಯಾರ್ಥಿ,

ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ.

# ಮಾರ್ಗದರ್ಶಕರ ಪ್ರಮಾಣ ಪತ್ರ

**'ಬಂಡೆಪ್ಪ ಖೂಬಾ ಅವರ ಬದುಕು-ಬರಹ'** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಬಸವರಾಜ ಸಿದ್ರಾಮಪ್ಪ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವು ದೇ ಪದವಿಗಾಗಿ ಸಲ್ಲಿಸಿರುವು ದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

ಸ್ಥಳ : ಬೀದರ

ದಿನಾಂಕ: ೧೫-೧೨-೨೦೦೫

**ಡಾ. ಸೋಮನಾಥ ಯಾಳವಾರ**

ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ.

# ಪರಿವಿಡಿ

ಅಧ್ಯಾಯ -ಒಂದು

## ಅಧ್ಯಯನದ ಉದ್ದೇಶ, ಮಹತ್ವ ಮತ್ತು ವಿಧಾನಗಳು

ಹೈದ್ರಾಬಾದ ಕರ್ನಾಟಕವು ಒಂದು 'ಸಾಂಸ್ಕೃತಿಕ ಖಣಿ' ಎಂದರೆ ತಪ್ಪಾಗಲಾರದು. ಅದಕ್ಕೆ ತನ್ನದೇ ಆದ ಪರಂಪರೆಯು ಇದೆ. ಕನ್ನಡ ಸಾಹಿತ್ಯ ಚರಿತ್ರೆಯ ಪುಟ ತಿರುವಿದಾಗ ಕನ್ನಡದ ಮೊದಲ ಉಪಲಬ್ಧ ಕೃತಿಯಾದ 'ಕವಿರಾಜ ಮಾರ್ಗ' ದೊರೆತ್ತಿದ್ದು ಈ ಭಾಗದಲ್ಲಿಯೇ. ವಚನ, ಅನುಭವ ಸಾಹಿತ್ಯ, ದಾಸ ಸಾಹಿತ್ಯ, ಪುರಾಣ ಸಾಹಿತ್ಯ, ಅಸಂಗತ ನಾಟಕ ಮತ್ತು ದಲಿತ-ಬಂಡಾಯ ಸಾಹಿತ್ಯ ಮುಂತಾದವುಗಳು ಜನ್ಮ ತಾಳಿದ ಈ ಭಾಗವು ಕನ್ನಡ ಸಾಹಿತ್ಯದ 'ಉಗಮಕುಂಡ' ಎಂದು ಹೇಳಬಹುದಾಗಿದೆ. ಸಾಹಿತ್ಯದಿಂದ ಸಮೃದ್ಧಿ ಇದ್ದರೂ ಅದನ್ನು ಶಾಸ್ತ್ರೀಯ ಅಧ್ಯಯನಕ್ಕೆ ಗುರಿಪಡಿಸಿದ್ದು ಅತಿ ವಿರಳ. ಅದಕ್ಕಾಗಿಯೇ ಅವುಗಳ ಸಂಶೋಧನೆ, ಸಂಪಾದನ ಕಾರ್ಯ ಜರುಗಬೇಕಾಗಿದೆ. ಹಲವು ಭಾಷೆಗಳ ಮತ್ತು ಹಲವು ಸಂಸ್ಕೃತಿಯರ ಆಡಳಿತದ ಪ್ರಭಾವದಿಂದ ಸಾಮಾಜಿಕ, ಶೈಕ್ಷಣಿಕ ಹಾಗೂ ಆರ್ಥಿಕ ಕ್ಷೇತ್ರದಲ್ಲಿ ಇಂದಿಗೂ ಪ್ರಗತಿಯೂ ಕುಂಠಿತವಾಗಿದ್ದು ಇದಕ್ಕೆ ಸಾಹಿತ್ಯವೂ ಹೊರತಾಗಿಲ್ಲ. ಕಾರಣ ಮೊದಲಿನಿಂದಲೂ ನಮ್ಮ ಭಾಗದ ಸಾಹಿತ್ಯವನ್ನೇ ಕುರಿತು ಅದರಲ್ಲೂ ಆಧುನಿಕ ಕವಿಯೊಬ್ಬನನ್ನು ಕುರಿತು ಅಧ್ಯಯನವನ್ನು ಕೈಗೊಳ್ಳಬೇಕೆಂಬ ಮನದಾಸೆಯನ್ನು ನನ್ನ ಮಾರ್ಗದರ್ಶಕರಾದ ಡಾಃ ಸೋಮನಾಥ ಯಾಳವಾರರ ಮುಂದಿಟ್ಟಾಗ ಅವರು ಸಂತೋಷದಿಂದ ಒಪ್ಪಿಕೊಂಡರು. ಈ ಹಿನ್ನೆಲೆಯಲ್ಲಿ "ಬಂಡೆಪ್ಪ ಖೂಬಾ ಅವರ ಬದುಕು-ಬರಹ" ಕುರಿತು ಪ್ರಸ್ತಾಪಿಸಿದಾಗ ಅದಕ್ಕೆ ಸಮ್ಮತಿಸಿದರು. ಸಂಶೋಧನ ಕೇಂದ್ರದ ನಿರ್ದೇಶಕರಾದ ಡಾಃ ಜಗನ್ನಾಥ ಹೆಬ್ಬಾಳೆಯವರು ಇದಕ್ಕೆ ಪ್ರೊತ್ಸಾಹ ನೀಡಿದರು. ಹೀಗಾಗಿ ಅಧ್ಯಯನ ಕೈಗೊಳ್ಳಲಾಯಿತು.

ನನ್ನ ಅಧ್ಯಯನದ ಕುರಿತು ಮನದಟ್ಟು ಮಾಡಿಕೊಂಡಾಗ ಲೇಖಕರೊಬ್ಬರನ್ನು ಎದುರಿಗಿಟ್ಟುಕೊಂಡು ಅವರ ಕೃತಿಗಳ ವಿಮರ್ಶಾತ್ಮಕ ಅಧ್ಯಯನ ಮಾಡುವುದು ಕಷ್ಟ ಸಾಧ್ಯ ಎಂದು ತಿಳಿಯಿತು. ಏಕೆಂದರೆ ಒಬ್ಬ ಕವಿಯ ಸಮಗ್ರ ಕೃತಿಗಳ ಅಧ್ಯಯನಕ್ಕೆ ತೊಡುಗುವಾಗ ಆತನ ಜೀವನ ಚರಿತ್ರೆಯನ್ನು ಸ್ಪಷ್ಟವಾಗಿ ತಿಳಿಯಬೇಕಾದುದು ಅತ್ಯವಶ್ಯಕವೆಂದು ಹೇಳಬೇಕು. ಏಕೆಂದರೆ ಸಂವೇದನಶೀಲ ಸಾಹಿತಿ ಅಥವಾ ಕಲಾವಿದ ಕೇವಲ ಒಬ್ಬ ವ್ಯಕ್ತಿಯಾಗಿರದೆ ತಾನು ಬದುಕುವ ಪ್ರದೇಶದ ಸಂಸ್ಕೃತಿಕ ಪ್ರತಿನಿಧಿಯಾಗಿರುತ್ತಾನೆ.

ಸೃಜನಶೀಲ ಸಾಹಿತಿಗಳಾದ ಶ್ರೀ ಬಂಡೆಪ್ಪ ಖೂಬಾ ಅವರ ಜೀವನ ಮತ್ತು ಅವರ ಕೃತಿಗಳಲ್ಲಿ ಬಂದ ಬದುಕಿನ ವಿವರಗಳನ್ನು ಗಮನಿಸಿದಾಗ ಅವರ ಬದುಕು-ಬರಹ ಒಂದೇ; ಬದುಕಿದಂತೆ ಬರೆದಿದ್ದಾರೆ, ಬರೆದಂತೆ ಬದುಕಿದ್ದಾರೆ. ಈ ದಿಸೆಯಿಂದ ಬಂಡೆಪ್ಪ ಅವರು ನಮ್ಮ ಸಂಸ್ಕೃತಿಯಲ್ಲಿ ಆಳವಾಗಿ ಬೇರು ಬಿಟ್ಟಿದ್ದಾರೆ. ಹೀಗಾಗಿ ಅವರ ಸಾಹಿತ್ಯದ ಮೂಲಕ ಅವರ ಜೀವನ ಚರಿತ್ರೆ ಅಷ್ಟೇ ಅಲ್ಲ ನಾಡಿನ ಚರಿತ್ರೆಯನ್ನು ಕಟ್ಟಿಕೊಳ್ಳಬೇಕಾಗಿದೆ.

ಒಟ್ಟಿನಲ್ಲಿ ಶ್ರೀ ಬಂಡೆಪ್ಪ ಖೂಬಾರವರ ಬಗ್ಗೆ ಇದುವರೆಗೆ ಬಿಡಿಭಾಗವು ಅಧ್ಯಯನ ನಡೆದಿಲ್ಲವೆಂಬುದು ಖಚಿತಪಡಿಸಿಕೊಂಡು ಅವರ ಜೀವನ ಮತ್ತು ಕೃತಿಗಳ ಸಂಶೋಧನಾತ್ಮಕ ಅಧ್ಯಯನದ ಅವಶ್ಯವಿದೆ. ಈ ಕಾರಣಕ್ಕಾಗಿ **"ಬಂಡೆಪ್ಪ ಖೂಬಾ ಅವರ ಬದುಕು-ಬರಹ"** ಎಂಬ ಹೆಸರಿನಲ್ಲಿ ಸಮಗ್ರ ಕೃತಿಗಳನ್ನು ಸಮಕಾಲಿನ ಬದುಕನ್ನು ದೃಷ್ಟಿಯಲ್ಲಿಟ್ಟುಕೊಂಡು ನೋಡಲಾಗಿದೆ. ಪ್ರಸ್ತುತ ಪ್ರಬಂಧದಲ್ಲಿ ಅವರ ಜೀವನದ ಸಾರ್ಥಕತೆ, ಸಾಹಿತ್ಯದ ಸಾಧಕ-ಭಾದಕಗಳನ್ನು ಅಧ್ಯಯನಕ್ಕೆ ಅಳವಡಿಸಲಾಗಿದೆ. ಅಧ್ಯಯನದ ವ್ಯಾಪ್ತಿಯನ್ನು ಮುಂಬರುವ ಅಧ್ಯಯನಗಳಲ್ಲಿ ವಿಭಾಗಿಸಿಕೊಂಡು ಅವುಗಳಲ್ಲಿರುವ ನೈಜ ತಿರುಳನ್ನು ವೈಚಾರಿಕವಾಗಿ, ವಾಸ್ತವವಾಗಿ, ಸಾಮಾಜಿಕವಾಗಿ ಶೋಧಿಸಿದ್ದೇನೆ. ಬಂಡೆಪ್ಪರ ಕೃತಿಗಳಲ್ಲಿ ಮೂಡಿ ಬಂದಿರುವ ಸಂವೇದನೆಗಳನ್ನು ಆಯಾ ಕೃತಿಗಳಲ್ಲಿಯೂ ಸಾಮಾಜಿಕ ಸಂಘರ್ಷಗಳನ್ನು ಸಂಶೋಧನಾತ್ಮಕ ದೃಷ್ಟಿಯಿಂದ ಚರ್ಚಿಸಲು ಹಾಗೂ ವೈಚಾರಿಕತೆಯೊಂದಿಗೆ ಹೊಲಿಸಿ ಅಧ್ಯಯನ ಕೈಗೊಳ್ಳಲು ಪ್ರಯತ್ನಿಸಿದ್ದೇನೆ. ಇದಕ್ಕೆ ಎಲ್ಲ ರೀತಿಯಿಂದ ಸಮರ್ಥ ಮಾರ್ಗದರ್ಶನ ಮಾಡಿರುವ ಡಾಃ ಸೋಮನಾಥ ಯಾಳವಾರ ಅವರಿಗೆ ನಾನು ಚಿರಋಣಿಯಾಗಿರುವೆನು.

**ಮಹತ್ವ :**

ಬಂಡೆಪ್ಪ ಖೂಬಾ ಅವರು ಹಲವು ನೆಲೆಗಳಲ್ಲಿ ಚಿಂತನಶೀಲ ಹಾಗೂ ಸಂವೇದನಶೀಲ ಬರಹಗಾರರು, ಅವರು ಕಾವ್ಯ, ಕಥೆ ಹಾಗೂ ಅನುವಾದ ಕೃತಿಗಳು ಹಲವು ದೃಷ್ಟಿಯಿಂದ ಮಹತ್ವದವುಗಳು ಎನ್ನಿಸುತ್ತಿದ್ದು ಜನಪರ ಕಾಳಜಿಯುಳ್ಳವದಾಗಿವೆ. ವಾಸ್ತವ ಬದುಕಿಗೆ ಬೇಕಾದ ಮತ್ತು ಅವಾಸ್ತವ ಬದುಕಿಗೆ ಹೀನತೆಯನ್ನು ಎತ್ತಿ ತೋರಿಸುವ ಗಮನಾರ್ಹ ಸಂಗತಿಗಳು ಆ ಕೃತಿಗಳಲ್ಲಿದ್ದು ಅವು ಜನಪರ ಕಾಳಜಿಯುಳ್ಳವುಗಳಾಗಿವೆ. ಅವುಗಳೆಂದರೆಸಾಮಾಜಿಕ ಚಿಂತನೆ, ರಾಜಕೀಯ ಚಿಂತನೆ, ವೈಜ್ಞಾನಿಕ ಚಿಂತನೆ, ಆಧ್ಯಾತ್ಮಿಕ ಚಿಂತನೆ, ಸಾಂಸ್ಕೃತಿಕ ಚಿಂತನೆ, ನಾಡು-ನುಡಿ ಚಿಂತನೆ ಮುಂತಾದವುಗಳು ಇವು ಓದುಗರ ಬದುಕಿಗೆ ಹಲವು ತಿರುವುಗಳನ್ನು ನೀಡುತ್ತಾ ಅವರನ್ನು ಚಿಂತನೆಗೆ ತೊಡಗಿಸುವುದರೊಂದಿಗೆ ಆ ನೆಲೆಯಲ್ಲಿ ಕ್ರಿಯಾಶೀಲರನ್ನಾಗಿ ಮಾಡುವ ಗುಣವನ್ನು ಹೊಂದಿವೆ. ವಸ್ತು, ಭಾವ, ಭಾಷೆ ಮತ್ತು ಘಟನೆಗಳ ವೈವಿಧ್ಯತೆಯಲ್ಲಿ ಗಮನ ಸೆಳೆಯುವ ಖೂಬಾ ಕೃತಿಗಳ ಅಧ್ಯಯನವು ಕೇವಲ ಒಬ್ಬ ಕವಿಯ ಜೀವನದ ಅಧ್ಯಯನವಾಗದೆ ಒಂದು ನಾಡಿನ ಸಾಂಸ್ಕೃತಿಕ ಅಧ್ಯಯನವಾಗುತ್ತವೆ. ಈ ದೃಷ್ಟಿಯಲ್ಲಿ "ಬಂಡೆಪ್ಪ ಖೂಬಾ ಅವರ ಬದುಕು-ಬರಹ" ದ ಅಧ್ಯಯನ ಅತ್ಯಂತ ಮಹತ್ವದೆನ್ನಬಹುದು.

**ವಿಧಾನಗಳುಃ-**

ಬಂಡೆಪ್ಪ ಖೂಬಾರವರ ಸಾಹಿತ್ಯದ ಕೃತಿಗಳನ್ನು ಸಂಗ್ರಹಿಸಿ, ಹೊಸಗನ್ನಡ ಸಾಹಿತ್ಯದ ವಿಮರ್ಶಾತ್ಮಕ ಅಧ್ಯಯನ ಹಾಗೂ ವಿಶ್ಲೇಷಣೆಯ ಮೂಲಕ ಅವುಗಳಲ್ಲಿರುವ ಹಲವು ವಿಚಾರಗಳನ್ನು ಪ್ರಸ್ತುತ ಸಂದರ್ಭಗಳಿಗೆ ಅನ್ವಯಿಸಿ ನೋಡುವುದರೊಂದಿಗೆ ಖೂಬಾರವರ ಬದುಕು-ಬರಹವನ್ನು ಕುರಿತು ಅಧ್ಯಯನ ಮಾಡಲಾಗಿದೆ.

ಅಧ್ಯಾಯ – ಎರಡು

## ಕವಿಯ ಜೀವನ ಮತ್ತು ಪರಿಸರ

ಈ ಶತಮಾನದ ಕನ್ನಡ ಸಾಹಿತಿಗಳ ಶ್ರೇಣಿಯಲ್ಲಿ ಶ್ರೀ ಬಂಡೆಪ್ಪ ಖೂಬಾ ಅವರು ವಿಶೇಷವಾಗಿ ಪರಿಗಣಿತವಾಗುವ ಸಾಹಿತಿ. ತಮ್ಮ ಪರಿಶುದ್ಧ ನಡೆ-ನುಡಿ, ಆಚಾರ-ವಿಚಾರಗಳಿಂದ, ವಿನಯ-ವಿವೇಕಗಳಿಂದ ಬೀದರ ಜಿಲ್ಲೆಯ ಜನರ ಪ್ರಿತ್ಯಾದರಗಳಿಗೆ ಭಾಜನರಾಗಿದ್ದಾರೆ. ಅಂತೆಯೇ ಅವರು ತಮ್ಮದೇಯಾದ ವಿಶಿಷ್ಟ ಬರವಣಿಗೆಯ ಮೂಲಕ ಅತ್ಯಂತ ಜನಪ್ರಿಯರೂ ಆಗಿದ್ದಾರೆ.

ಬಂಡೆಪ್ಪ ಖೂಬಾ ಅವರು ಬೀದರ ಜಿಲ್ಲೆಯಿ ಕವಿ, ಜೀವನ ಚರಿತ್ರೆಕಾರ, ವಿಮರ್ಶಕ, ಆಧ್ಯಾತ್ಮ ಚಿಂತಕ ಅವರದು ಸೃಜನಾತ್ಮಕ ಬರವಣಿಗೆ, ತನ್ನ ಸುತ್ತಮುತ್ತಲಿನ ಜೀವನವನ್ನು ಸದಾ ಪ್ರತಿಭೆ ಕಣ್ಣಿನಿಂದ ನೋಡುವ ಈ ವ್ಯಕ್ತಿಯು ಹಲವು ಚಿಂತನೆಗಳಿಂದ ಅತ್ಯಂತ ಪ್ರಮುಖವಾಗುತ್ತಾನೆ.

ಬೀದರ ಜಿಲ್ಲೆಯ ಆಧುನಿಕ ಸಾಹಿತಿಗಳ ಪಂಕ್ತಿಯಲ್ಲಿ ಶ್ರೀ ಬಂಡೆಪ್ಪ ಖೂಬಾ ಅವರು ಪ್ರಮುಖ ಕವಿ, ಆಡು ಭಾಷೆಯ ಲಲಿತ ಶೈಲಿಯಲ್ಲಿ ಕಾವ್ಯವನ್ನು ರಚಿಸಿರುವ ಇವರು ಕಂಥಾಸಂಕಲನ, ಅನುವಾದಿತ ಕಥಾಸಂಕಲನ, ಆಧುನಿಕ ವಚನ ಮತ್ತು ಜೀವನ ಚರಿತ್ರೆ ಮೊದಲಾದ ಸಾಹಿತ್ಯ ಪ್ರಕಾರಗಳನ್ನು ರಚಿಸಿದವರಲ್ಲಿ ಪ್ರಮುಖರು ಶಿಕ್ಷಣ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿ, ಉತ್ತಮ ಅಧ್ಯಾಪಕರಾಗಿದ್ದುಕೊಂಡು ಕವಿಯಾಗಿ ಬೆಳೆದಿದ್ದಾರೆ.

"ಕವಿಗಳು ಹುಟ್ಟುತ್ತಾರೆ ಅವರನ್ನು ಮಾಡಲ್ಪಡುವುದಿಲ್ಲ" ಎನ್ನುವ ಮಾತಿಗೆ ನಿದರ್ಶನದಂತಿರುವ ಖೂಬಾ ಅವರು ಚಿಕ್ಕಂದಿನಿಂದಲೇ ಪ್ರತಿಭಾ ಶಕ್ತಿಯನ್ನು ಹೊಂದಿರುವ ಗಣ್ಯರು. ಅವರ ಲೇಖನಿಯಿಂದ ಈವರೆಗೆ ಹರಿದು ಬಂದದ್ದು ಗಮನಾರ್ಹವಾದ ಕಾವ್ಯದ ತೊರೆ ಯಾವ ಸದ್ದುಗದ್ದಲವಿಲ್ಲದೆ ಪ್ರಚಾರ ಪ್ರಕಾಶನಕ್ಕೆ ಆಶೆಪಡದೆ ತಮ್ಮನ್ನು ಎಲ್ಲೂ ನಾನು ಕವಿ ಎಂದು ಪರಿಚಯಿಸಿಕೊಳ್ಳದೆ 'ಪುಷ್ಪದ ಮರೆಯ ಪರಿಮಳ' ದಂತೆ ಬಾಳಿದ್ದಾರೆ. ಹಾಗೂ ಬೀದರ ಜಿಲ್ಲೆಯ ಸಾಹಿತ್ಯ ಕ್ಷೇತ್ರದ ಮೂಲಕ ಕನ್ನಡಕ್ಕೆ ತನ್ನದೆ ಆದ ಕಾಣಿಕೆ ನೀಡಿದ್ದಾರೆ.

### ಬಾಲ್ಯ ಜೀವನ ಹಾಗೂ ಸಾಧನೆ

ಶ್ರೀ ಬಂಡೆಪ್ಪ ಖೂಬಾ ಅವರು ಹುಟ್ಟಿದ್ದು ೧೯೩೮ ನೇ ಜುಲೈ ೮ ರಂದು ಬೀದರ ಜಿಲ್ಲೆಯ ಬಸವಕಲ್ಯಾಣ ತಾಲೂಕಿನ ರಾಜೋಳ ಅವರಿಗೆ ಜನ್ಮ ನೀಡಿದ ಸ್ಥಳ ಶರಣಪ್ಪ ಮತ್ತು ರತ್ನಮ್ಮರು ಇವರ ತಂದೆ ತಾಯಂದಿರು ಅವರದು ಬಡತನದ ಕುಟುಂಬ ಆದರೆ ಸುಸಂಸ್ಕೃತೆಗೆ ಹೆಸರಾದ ಮನೆತನ.

ಆಗ ಹೈದ್ರಾಬಾದ ಕರ್ನಾಟಕದ ವಿದ್ಯಾಭ್ಯಾಸದ ಮಾಧ್ಯಮ ಉರ್ದು ಅಥವಾ ಮರಾಠಿ ಆಗಿರುತ್ತಿತ್ತು. ಮಾತೃಭಾಷೆ ಕನ್ನಡವಾಗಿದ್ದರೂ ಐದನೇ ತರಗತಿಯವರೆಗೆ ಮರಾಠಿ ಮಾಧ್ಯಮದಲ್ಲೇ ಅಭ್ಯಾಸ ಮಾಡಬೇಕಾದುದ್ದರಿಂದ, ಇವರ ವಿದ್ಯಾಭ್ಯಾಸ ಹಾಗೆಯೇ ಸಾಗಿತು. ಆರಂಭದಲ್ಲಿ ಕುಟುಂಬದ ಕಡುಬಡತನದಿಂದ ಇವರಿಗೆ ಶಿಕ್ಷಣ ಕೊಡಿಸುವುದು ತಂದೆಯವರಿಗೆ ಅಸಾಧ್ಯವೆನಿಸಿತ್ತು. ಹೀಗಾಗಿ ಅವರ ದೊಡ್ಡಮ್ಮಳಾದ ಮಹಾದೇವಿ ಹುಗ್ಗೆಯವರಲ್ಲಿ ಇವರು ಬಾಲ್ಯದಲ್ಲಿ ಶಿಕ್ಷಣ ಪಡೆದರು.

ಕಲಿಯಬೇಕೆಂಬ ಅಚಲವಾದ ಬಯಕೆಯುಳ್ಳ ಬಂಡೆಪ್ಪನವರಿಗೆ ೧೯೫೦ ರಲ್ಲಿ ಐದನೇ ತರಗತಿಯಲ್ಲಿ ಪ್ರವೇಶ ಕೊಡಿಸಿದರು. ಅಲ್ಲಿ ಅಚ್ಚಗನ್ನಡಿಗರಾದ ಶ್ರೀಪಾದ ಭಟ್ಟವೈದ್ಯ ಎಂಬ ಗುರುಗಳ ಪ್ರೇರಣೆಯಿಂದ ಆರನೇ ತರಗತಿಯಲ್ಲಿ ಕನ್ನಡ ಭಾಷೆಯನ್ನು ಅಧ್ಯಯನದ ಮಾಧ್ಯಮವನ್ನಾಗಿ ಸ್ವೀಕರಿಸಿದರು. ಅಭ್ಯಾಸವು ಕನ್ನಡ ಮೂಲಕ್ಷಾರದಿಂದಲೇ ಪ್ರಾರಂಭವಾದರೂ ಕೆಲವೇ ತಿಂಗಳಲ್ಲಿ ಕನ್ನಡವನ್ನು ಓದಲು ಬರೆಯಲು ಕಲಿತರು. ಅಲ್ಲದೇ ಶ್ರೀಮತಿ ಸರಸ್ವತಿ ವೈದ್ಯರ ಪ್ರೇರಣೆಯಿಂದ 'ಕನ್ನಡ ಕಾವ' ಪರೀಕ್ಷೆಗೆ ಕುಳಿತು ಉತ್ತೀರ್ಣರಾದರು. ೧೯೫೧–೫೨ ರಲ್ಲಿ ಏಳನೇ ತರಗತಿಯಲ್ಲಿ ಓದುವಾಗ 'ಕನ್ನಡ ಜಾಣ' ಪರೀಕ್ಷೆಗೆ ಕುಳಿತು ಪಾಸಾದರು. ಗುರುಮಾತೆ ಶ್ರೀಮತಿ ಸರಸ್ವತಿಬಾಯಿ ವೈದ್ಯರು ಕೂಡ ಅದೇ ಪರೀಕ್ಷೆಗೆ ಕುಳಿತಿದ್ದರಿಂದ ಅವರೊಂದಿಗೆ ಅಭ್ಯಾಸ ಮಾಡುತ್ತಿದ್ದರು. ಆ ಪರೀಕ್ಷೆಯ ಪಠ್ಯಗಳು ಖೂಬಾರ ಜೀವನದ ಮೇಲೆ ದಟ್ಟ ಪ್ರಭಾವ ಬೀರಿದವು ಎನ್ನಬಹುದು. ಆ ಪರೀಕ್ಷೆಗೆ 'ಜೇಮ್ಸ್ ಇಬ್ರಾಹಿಂ ಗಾರಫಿಲ್ಡ್'ನ ಚರಿತ್ರೆಯನ್ನು ಪಠ್ಯ ಪುಸ್ತಕವಾಗಿರಿಸಲಾಗಿತ್ತು. ಅದರಲ್ಲಿ ಜೇಮ್ಸನ ತಾಯಿಯು ತನ್ನ ಮಗುವನ್ನು 'ಜಿಮ್ಮಿ' ಎಂದು ಸಂಭೋಧಿಸುತ್ತಿದ್ದಳು. ಈ ಪ್ರಭಾವ ಇವರ ಮೇಲೆ ಎಷ್ಟೊಂದು ಗಾಢವಾಗಿ ಉಳಿಯಿತೆಂದರೆ, ಇವರ ಕಾವ್ಯನಾಮದಲ್ಲಿ "ಜಿಮ್ಮಿ" ಪದ ಸೇರಿಕೊಳ್ಳಲು ಅದೇ ಮುಂದೆ ಕಾರಣವಾಯಿತು.

ಗುರುಮಾತೆ ಸರಸ್ವತಿ ವೈದ್ಯರು ಜೇಮ್ಸನಲ್ಲಿರುವ ಪ್ರತಿಭೆ, ಪಾಂಡಿತ್ಯ, ಉತ್ಸಾಹ, ಕಾರ್ಯ ನೈಪುಣ್ಯ, ಮುಂತಾದ ಗುಣಗಳು ಬಂಡೆಪ್ಪನಲ್ಲಿವೆಯೆಂದು ಗುರುತಿಸಿ, ಅವರು ವಾತ್ಸಲ್ಯದಿಂದ ಇವರನ್ನು "ಜಿಮ್ಮಿ" ಎಂದೇ ಸಂಬೋಧಿಸತೊಡಗಿದರು. ಅಂದಿನಿಂದ ಬಂಡೆಪ್ಪ ಅವರು ಆ ತಾಯಿಯ ಪ್ರೀತಿಯ ಮಗ "ಜಿಮ್ಮ" ಎನಿಸಿದರು. ಹೀಗಾಗಿ ಅವರು 'ಸರಸ್ವತಿ' ತಾನು "ಜಿಮ್ಮ" ಎನಿಸಿದ್ದರಿಂದ ತಾನು "ಸರಸ್ವತಿತನಯಜಿಮ್ಮನಾದೆ" ಎಂದು ಮುಕ್ತ ಕಂಠದಿಂದ ಕವಿಯು ಹೇಳುತ್ತಾರೆ. ರತ್ನಮ್ಮಾ ಹಡೆದ ತಾಯಿಯಾದರೆ, ಸರಸ್ವತಿಬಾಯಿ ಪಡೆದ ತಾಯಿಯೆನಿಸಿದರು. ಆಗಿನಿಂದಲೇ ಇವರ ಕಾವ್ಯನಾಮವು 'ಸರಸ್ವತಿತನಯಜಿಮ್ಮ' ಎಂದಾಯಿತು. ಅಂದಿನಿಂದ ಅವರು ಬರೆಯಲು ಪ್ರಾರಂಭಿಸಿದ ಎಲ್ಲ ಕವಿತೆಗಳನ್ನು 'ಸರಸ್ವತಿತನಯಜಿಮ್ಮ' ಎಂಬ ಅಂಕಿತದಲ್ಲಿಯೇ ಬರೆಯತೊಡಗಿದರು.

ಬಾಲ್ಯದಿಂದಲೇ ಸಾಹಿತ್ಯದಲ್ಲಿ ಆಸಕ್ತಿ ಹೊಂದಿದ್ದ ಬಂಡೆಪ್ಪ ಅವರು ಏಳನೇಯ ತರಗತಿಯಲ್ಲಿದಾಗಲೇ ಒಂದೆರಡು ಕವನಗಳನ್ನು ಬರೆದರು. ಆ ವರ್ಷ ರಾಷ್ಟ್ರ ಭಾಷಾ ಪ್ರಚಾರ ಸಮಿತಿಯವರು ನಡೆಸುವ ಹಿಂದಿ 'ಕೋವಿದ' ಪರೀಕ್ಷೆಯಲ್ಲಿ ಭಾಗವಹಿಸಿ ಉತ್ತೀರ್ಣರಾದರು. ಇದರಿಂದ ಅವರಲ್ಲಿ ಬಹು ಬಹುಭಾಷಾ ಪಾಂಡಿತ್ಯ ಜ್ಞಾನ ಹೆಚ್ಚಾಯಿತು. ಒಂದೆಡೆ ಭಾಷಾಜ್ಞಾನ, ಇನ್ನೊಂದಡೆ ಗುರುಕೃಪೆ ಅವರ ಬರವಣಿಗೆಗೆ ಪ್ರೋತ್ಸಾಹ ಒದಗಿಸಿತು. ಹೀಗಾಗಿ ಅವರು ಸಾಹಿತ್ಯ ನಿರ್ಮಾಣ ಮಾಡುವಷ್ಟರ ಮಟ್ಟಿಗೆ ಬೆಳೆಯಲು ಇದು ಕಾರಣವಾಯಿತು. ಆಗಿನಿಂದಲೇ ಕವಿತೆಗಳನ್ನು ಬರೆದರು. ಆದರೆ ಅವುಗಳನ್ನು ಕಾಪಾಡಿಟ್ಟುಕೊಳ್ಳಲಿಲ್ಲ. ಹಾಗೂ ಎಲ್ಲಿಯೂ ಪ್ರಕಟಿಸಲಿಲ್ಲ. ಸುಮಾರು ಬರೆದ ಕವಿತೆಗಳನ್ನು ಅವರು ರಕ್ಷಿಸಿಟ್ಟುಕೊಂಡಿಲ್ಲದಿರುವುದರಿಂದ ಅವರ ಇನ್ನಷ್ಟು ಸಾಹಿತ್ಯ ನಮ್ಮಿಂದ ಮರೆಯಾಗಿದೆ ಎನ್ನಬಹುದು.

೧೯೫೫–೫೬ ರಲ್ಲಿ ಹತ್ತನೆ ತರಗತಿಗಾಗಿ ಗುಲಬರ್ಗಾದ ಶ್ರೀ ಶರಣಬಸವೇಶ್ವರ ಪ್ರೌಢಶಾಲೆಗೆ ಇವರು ಸೇರಿಕೊಂಡರು ನಿಬಂಧ ಸ್ಪರ್ಧೆಯಲ್ಲಿ ಪ್ರಥಮ ಬಂದವರು ಶಾಲಾ ಸ್ಮರಣ ಸಂಚಿಕೆ 'ಹೂಗೊಂಚಲಿನ' ಸಂಪಾದಕರಾಗುವ ಪರಿಪಾಠ ಆ ಶಾಲೆಯಲ್ಲಿ ಬೆಳೆದು ಬಂದಿತ್ತು. ಆ ವರ್ಷ ಬಂಡೆಪ್ಪ ಅವರು ಬರೆದಿರುವ ನಿಬಂಧವೇ ಪ್ರಥಮ ಬಹುಮಾನಕ್ಕೆ ಆಯ್ಕೆಯಾಗಿದ್ದರಿಂದ ಇವರೇ 'ಹೂಗೊಂಚಲಿನ' ಸಂಪಾದಕರಾದರು. ಬಂಡೆಪ್ಪನವರ ವ್ಯಕ್ತಿತ್ವದ ನಿರ್ಮಾಣ ಕ್ರಿಯೆಯಲ್ಲಿ ಗುಲಬರ್ಗಾ ಮಹತ್ವದ ಕೊಡುಗೆ ನೀಡಿತೆನ್ನಬಹುದು. ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಕ್ಷೇತ್ರದ ಪರಿಚಯ ಮಾಡಿಕೊಡುತ್ತಲೇ ಅದು ಸಾಮಾಜಿಕ ಚಿಂತನೆಗೆ ಅನುವು ಮಾಡಿಕೊಟ್ಟ ಪ್ರದೇಶವಾಯಿತು. ಅಲ್ಲಿಯ ಶ್ರೀ ಎಸ್.ಎಸ್. ಬಾಣದ ಮತ್ತು ಶ್ರೀ ಬಸವಲಿಂಗಯ್ಯ ಮಲ್ಲಾಪೂರ ಅವರ ಪ್ರೇರಣೆಯಿಂದ ಅನುತ್ತರನ ಪೌರುಷ ಎಂಬ ಪದ್ಯವನ್ನು ಭಾಮಿನಿ ಷಟ್ಪದಿಯಲ್ಲಿ ಹಾಗೂ 'ಅಳುನಗೆ' ಎಂಬ ಕವನಗಳನ್ನು ಬರೆದರು. ಇವರ ಕವನಗಳನ್ನು ಓದಿ ಮೆಚ್ಚುಗೆಯನ್ನು ವ್ಯಕ್ತಪಡಿಸಿದ ಆ ಇಬ್ಬರೂ ಮಹನೀಯರೇ ಇವರ ಸಾಹಿತ್ಯ ಪ್ರೇರಕರು. ಇವರಿಂದಲೇ ಮುಂದಿನ ಬರವಣಿಗೆಗೆ ಪ್ರೋತ್ಸಾಹ ದೊರೆಯಿತೆಂದು ಕವಿಯು ಹೇಳಿಕೊಳ್ಳುತ್ತಾರೆ.

೧೯೫೬ ರಲ್ಲಿ ಮೆಟ್ರಿಕ್ ಪಾಸಾದನಂತರ ಇವರಿಗೆ ಓದು ಮುಂದುವರಿಸಬೇಕೆಂಬ ಆಶೆಯಿದ್ದರೂ ಮನೆಯಲ್ಲಿಯ ಬಡತನ ಅತಿಯಾಯ್ತು ಅವರ ತಂದೆ ತಾಯಿಗಳಿಗೆ ಮಗನಿಗೆ ವಿದ್ಯಾಭ್ಯಾಸ ಮಾಡಿಸುವ ಆಸೆಯಿಂದ ಅವರು ಮಗನನ್ನು ಕಲಿಸುವವರಿಗೆ ಮನೆ ಅಳಿಯನನ್ನಾಗಿ ಮಾಡಿಕೊಡಬೇಕೆಂದು ಇಚ್ಛಿಸಿದರು ಇದನ್ನು ನೇರವೇರಿಸಿಕೊಟ್ಟವರು ಹುಮನಾಬಾದಿನ ಗಡವಂತಿ ಗ್ರಾಮದ ಪಾರಮ್ಮ ವೀರಪಣ್ಣ ಎಂಬ ದಂಪತಿಗಳು ತನ್ನ ಏಕೈಕ ಮಗಳಾದ ಅಯ್ಯಮ್ಮಳನ್ನು ಕೊಟ್ಟು ಮದುವೆ ಮಾಡಿಸಿದರು. ಮದುವೆಯ ನಂತರ ಕಲಿಸುತ್ತೇವೆಂದು ಮಾತುಕೊಟ್ಟರು. ಆದರೆ ಮದುವೆಯಾದ ಮೇಲೆ ಮಾತು ಬದಲಾಯಿಸಿ ಇನ್ನು ಮುಂದೆ ಕಲಿತಾದರೂ ಏನು ಮಾಡುವುದಿದೆ, ಸಾಕು ಇಷ್ಟು ವಿದ್ಯೆ ಎಂದು ನುಡಿದಂತೆ ನಡೆಯಲ್ಲಿಲ್ಲ.

ಇದರಿಂದ ಇವರು ಬಹಳ ನೊಂದುಕೊಂಡು ಹೇಗಾದರೂ ಮಾಡಿ ತಾನು ಕಲಿಯಬೇಕೆಂದು ನಿಶ್ಚಯಿಸಿ ದಾಂಪತ್ಯ ಜೀವನ ನಡೆಸಿದರು. ಈ ಕಾರಣದಿಂದ ಒಂದು ವರ್ಷ ವಿದ್ಯಾಭ್ಯಾಸ ಕುಂಠಿತಗೊಂಡಿತು. ಬಂಡೆಪ್ಪ ಅವರು ಅಷ್ಟಕ್ಕೆ ಸಂತೃಪ್ತಿ ಪಡದೆ ತನ್ನ ನೋವಿನ ಅಳಲನ್ನು ತನ್ನ ತಂದೆಯವರ ಮುಂದೆ ಪ್ರಸ್ತಾಪಿಸಿದರು. ತಂದೆಯವರು ಮಗನ ಬಯಕೆಗೆ ಓಗೊಟ್ಟು ತನ್ನ ಬಡತನದ ಚಿಂತೆ ಬದಿಗೊತ್ತಿ ಮಗನಿಗೆ ಕಲಿಸುವ ಹೊಣೆಗಾರಿಕೆಯನ್ನು ಪುನಃ ತಾವೇ ಹೊತ್ತುಕೊಂಡರು. ಇದರ ಪರಿಣಾಮವಾಗಿ ೧೯೫೭-೫೮ ರಲ್ಲಿ ಗುಲಬರ್ಗಾದ ಕಲಾ ಮತ್ತು ವಿಜ್ಞಾನ ಕಾಲೇಜಿನಲ್ಲಿ ಪಿ.ಯು.ಸಿ. ಕಲಾ ವಿಭಾಗಕ್ಕೆ ಸೇರಿಕೊಂಡರು. ಸತತವಾದ ಅಧ್ಯಯನ, ಹಿತ-ಮಿತವಾದ ಮಾತು, ದುಂಡಾದ ಅಕ್ಷರಗಳನ್ನು ಬರೆಯುವುದರಿಂದ ಗುರುಹಿರಿಯರ ಪ್ರೀತಿಗೆ ಪಾತ್ರರಾಗಿದ್ದುದಲ್ಲದೆ ವಿದ್ಯಾರ್ಥಿ ಜೀವನದಲ್ಲಿ ಅನೇಕ ಸಮಸ್ಯೆಗಳು ಬಂದರೂ ಅವೆಲ್ಲವುಗಳನ್ನು ಎದುರಿಸಿ. ಉತ್ತಮ ವ್ಯಕ್ತಿತ್ವವನ್ನು ರೂಪಿಸಿಕೊಂಡರು. ಆ ವರ್ಷದ ನಿಬಂಧ ಸ್ಪರ್ಧೆಯಲ್ಲಿ ಪ್ರಥಮನಾದ್ದರಿಂದ ಕಾಲೇಜಿನ 'ಮಿಂಚು' ಸ್ಮರಣ ಸಂಚಿಕೆಯ ಸಂಪಾದಕರಾದರು. ಆ ವರ್ಷ ಕಾಲೇಜಿನಲ್ಲಿ ಏರ್ಪಡಿಸಿದ ಕವಿತಾ ಸ್ಪರ್ಧೆಯಲ್ಲಿ ಶಾಂತಿ ಹೇಗೆ ಸಾಧ್ಯವಿಲ್ಲ? ಎಂಬ ಕವನ ಓದಿ ಪ್ರಥಮ ಬಹುಮಾನ ಪಡೆದರು.

೧೯೫೮ ರಲ್ಲಿ ಪಿ.ಯು.ಸಿ. ಪಾಸಾಗಿ ತಮ್ಮ ವಿದ್ಯಾರ್ಥಿ ಜೀವನದ ಒಂದು ಹಂತವನ್ನು ತಲುಪಿದರು. ಆದರೆ ಮುಂದೆ ಕಲಿಯಬೇಕಾದರೆ ತಂದೆಯವರನ್ನು ಸಾಲದಲ್ಲಿ ಮುಳುಗಿಸಿ ಸಾಧಿಸುವುದೇನಿದೆ? ಎಂದು ಆತ್ಮಾವಲೋಕನ ಮಾಡಿಕೊಂಡು ಮುಂದಿನ ಕಲಿಯುವಿಕೆಯನ್ನು ನಿಲ್ಲಿಸಿ, ಮಾವನ ಮನೆಯಲ್ಲಿದ್ದರೆ ತಂದೆಯ ಋಣದಿಂದ ಮುಕ್ತನಾಗಲಾರೆನೆಂದು ಆಲೋಚಿಸಿ ಹೆಚ್ಚಿನ ವಿದ್ಯಾಭ್ಯಾಸವನ್ನು ನಿಲ್ಲಿಸಿದರು.

ಬಂಡೆಪ್ಪ ಅವರು ಪೂರ್ವಾಪರ ವಿಚಾರ ಮಾಡದೆ ಯಾವುದೇ ಕಾರ್ಯದಲ್ಲಿ ತೊಡಗುತ್ತಿರಲಿಲ್ಲ. ಹಾಗಾಗಿಯೇ ಅವರ ಆತ್ಮಾಭಿಮಾನವು ಬೇಗ ಜಾಗೃತಗೊಂಡು ಮಾವನ ಮನೆಯಲ್ಲಿರುವುದಕ್ಕಿಂತ ನೌಕರಿ ಮಾಡುತ್ತ ಬಂಧನದಿಂದ ಬಿಡುಗಡೆ ಹೊಂದಿ ಸ್ವತಂತ್ರವಾಗಿ ಬದುಕಬೇಕೆಂದು ಆಲೋಚಿಸಿ ಶಿಕ್ಷಕ ವೃತ್ತಿಗೆ ಅರ್ಜಿ ಹಾಕಿದರು. ಮುಂದೆ ಗುರಿ ಹಿಂದೆ ಗುರುವಿನ ಬಲವಿದ್ದ ಮೇಲೆ, ಸತತವಾದ ಪ್ರಯತ್ನ ಮತ್ತು ಆತ್ಮವಿಶ್ವಾಸದ ಬಲದಿಂದ ನೌಕರಿಯನ್ನು ಸಂಪಾದಿಸಿದರು. ಈ ಸಂದರ್ಭದಲ್ಲಿಯ ಅವರ ಪರಿಶ್ರಮ ಅನುಕರಣೀಯವಾಗಿದೆ.

೧೯೫೮ ರ ಅಕ್ಟೋಬರ್ ತಿಂಗಳಲ್ಲಿ ಇವರು ಪ್ರಾಥಮಿಕ ಶಾಲಾ ಶಿಕ್ಷಕನಾಗಿ ಸರಕಾರಿ ಸೇವೆಯಲ್ಲಿ ಸೇರಿಕೊಂಡರು. ಆ ಸಂದರ್ಭದಲ್ಲಿ ಅವರಲ್ಲಿ ಹುದುಗಿರುವ 'ಜಿಮ್ಮನ ಸಾಹಿತ್ಯ' ಚಟುವಟಿಕೆ ಕೆಲಕಾಲ ಕುಂಠಿತಗೊಂಡು ಜೀವನದಲ್ಲಿಯ ಏರು-ಪೇರುಗಳಿಂದ ನಿರಾಶರಾದ ಅವರು, ಕವಿತೆ ಬರೆಯುವುದನ್ನು ಕೆಲವು ದಿನ ನಿಲ್ಲಿಸಿಬಿಟ್ಟರು. ಅಲ್ಲದೇ ಗುರುಗಳ ಸಂಪರ್ಕವೂ ದೂರಾದುದರಿಂದ ಕೇವಲ ವೃತ್ತಿ ಜೀವನವನ್ನು ಮುಂದುವರೆಸಿಕೊಂಡು

ಹೋದರು. ಎಂಟು ವರ್ಷಗಳ ನಂತರ ಉನ್ನತ ಶಿಕ್ಷಣದ ಆಶೆಹೊಂದಿ ಅವರು ಕರ್ನಾಟಕ ವಿಶ್ವವಿದ್ಯಾಲಯದಿಂದ ಬಾಹ್ಯ ವಿದ್ಯಾರ್ಥಿಯಾಗಿ ೧೯೬೬ ರಲ್ಲಿ ಬಿ.ಎ. ಪದವಿಯನ್ನು ಸಂಪಾದಿಸಿಕೊಂಡರು. ೧೯೭೦ ರಲ್ಲಿ ಹಿಂದಿ ಎಂ.ಎ. ಪದವಿ ೧೯೭೨ ರಲ್ಲಿ ಬಿ.ಇಡಿ. ಪದವಿಯನ್ನು ಪಡೆದುಕೊಂಡು ಶಿವಾಜಿ ವಿಶ್ವವಿದ್ಯಾಲಯದಿಂದ ೧೯೭೬ ರಲ್ಲಿ ಕನ್ನಡ ಎಂ.ಎ. ಪದವಿಯನ್ನು ಪಡೆದರು. ಆದರೂ ಸರಕಾರಿ ಜೇಷ್ಠತಾ ಪಟ್ಟಿಯ ನಿಯಮಕೊಳ್ಳಪಟ್ಟು ೧೯೮೩ ರವರೆಗೆ ಅವರು ಪ್ರಾಥಮಿಕ ಶಾಲಾ ಶಿಕ್ಷಕನಾಗಿಯೇ ಮುಂದುವರೆಯಬೇಕಾಯಿತು. ಇದು ಸಹ ಇವರ ನಿರಾಶೆ ಜೀವನದ ಕಾರಣಗಳಲ್ಲಿ ಒಂದಾಯಿತು.

೧೯೮೩ ರಲ್ಲಿ ಪ್ರೌಢಶಾಲಾ ಶಿಕ್ಷಕನೆಂದು ಪದೋನ್ನತಿಗೊಂಡು ೧೯೯೬ ರವರೆಗೆ ಪ್ರೌಢಶಾಲಾ ಶಿಕ್ಷಕನಾಗಿಯೇ ಸೇವೆ ಸಲ್ಲಿಸಿ ೧೯೯೬ ರ ಜುಲೈ ತಿಂಗಳಲ್ಲಿ ನಿವೃತ್ತಿ ಹೊಂದಿದ್ದರು. ಹೀಗೆ ಸುಮಾರು ೨೩ ವರ್ಷ ಪ್ರಾಥಮಿಕ ಶಿಕ್ಷಕ ಮತ್ತು ೧೪ ವರ್ಷ ಹೈಸ್ಕೂಲು ಶಿಕ್ಷಕನಾಗಿ ಒಟ್ಟು ೩೭ ವರ್ಷ ಶಿಕ್ಷಕ ವೃತ್ತಿಯ ಜವಾಬ್ದಾರಿಯನ್ನು ಅವರು ಪೂರೈಸಿದ ನಂತರದ ಅವರ ಜೀವನ ವಿಧಾನ ಬದಲಾವಣೆಗೊಂಡಿತು. ಸಾಂಸ್ಕೃತಿಕ ಬದುಕಿನಲ್ಲಿ ಅವರು ಹೆಜ್ಜೆ ಇರಿಸುವುದರೊಂದಿಗೆ ಹಲವು ಸಂಘ–ಸಂಸ್ಥೆಗಳ ಪದಾಧಿಕಾರಿಗಳಾಗಿ ಸೇವೆಗೆ ತೊಡಗಿದರು. ೧೯೭೭ ರಿಂದ ೧೯೮೩ ರವರೆಗೆ ಹುಮನಾಬಾದ ತಾಲೂಕಾ ಪ್ರಾಥಮಿಕ ಶಾಲಾ ಶಿಕ್ಷಕ ಸಂಘದ ಅಧ್ಯಕ್ಷರಾಗಿದ್ದುಕೊಂಡು ಶಿಕ್ಷಕರ ಅನೇಕ ಕುಂದು ಕೊರತೆಗಳನ್ನು ನಿವಾರಿಸುವಲ್ಲಿ ಪ್ರಮುಖ ಪಾತ್ರವಹಿಸಿದರು. ಬಸವಕಲ್ಯಾಣದಲ್ಲಿ ಏರ್ಪಡಿಸಿದ್ದ ಬೀದರ ಜಿಲ್ಲಾ ಮಟ್ಟದ ಶೈಕ್ಷಣಿಕ ಸಮ್ಮೇಳನದಲ್ಲಿ ಸಕ್ರೀಯವಾಗಿ ದುಡಿದುದ್ದಲ್ಲದೆ ಆ ಸಮ್ಮೇಳನಕ್ಕೆ ಯಶಸ್ಸು ತಂದು ಕೊಟ್ಟ ಹಲವರಲ್ಲಿ ಇವರು ಒಬ್ಬರೆನಿಸಿದರು.

ಶಿಕ್ಷಕರಾಗಿ, ಮಕ್ಕಳ ಪ್ರೀತಿಗೆ ಪಾತ್ರರಾಗಿದ್ದ ಬಂಡೆಪ್ಪನವರು ಶಿಸ್ತಿಗೆ ಹೆಸರಾದವರು. ಅವರ ಸೇವಾ ನಿಷ್ಠತೆಗೆ ಮೇಲಾಧಿಕಾರಿಗಳು ಸದಾ ಪ್ರಶಂಸಿಸುತ್ತಿದ್ದರು. ಅವರ ಈ ಸೇವೆಯನ್ನು ಗಮನಿಸಿ ೧೯೯೪ ರಲ್ಲಿ ಅವರಿಗೆ 'ಬೀದರ ಜಿಲ್ಲಾ ಅತ್ಯುತ್ತಮ ಪ್ರೌಢಶಾಲಾ ಶಿಕ್ಷಕ' ಪ್ರಶಸ್ತಿಯನ್ನು ನೀಡಿ ಗೌರವಿಸಲಾಯಿತು.

ನಿವೃತ್ತಿಯ ನಂತರ ಅವರ ಸಾಹಿತ್ಯ ಸಮೃದ್ಧವಾಗಿ ಹೊರಹೊಮ್ಮಿದೆ ಎಂಬುದನ್ನು ನಂತರದ ಅಧ್ಯಾಯಗಳಲ್ಲಿ ಗುರುತಿಸಬಹುದು. ಅವರ ಸಾಹಿತ್ಯದ ವಿಕಾಸದ ಹಾದಿಯಲ್ಲಿ ಅವರ ಕೌಟುಂಬಿಕ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕು ಒಂದು ಮೈಲುಗಲ್ಲಾಗಿ ನಿಲ್ಲುತ್ತದೆ ಎಂಬುದನ್ನು ಈ ಅಧ್ಯಯನಗಳಲ್ಲಿ ಕಾಣಬಹುದಾಗಿದೆ.

*** ಕೌಟುಂಬಿಕ ಜೀವನ :–**

ಬಂಡೆಪ್ಪ ಖೂಬಾ ಅವರದು ಅನ್ಯೋನ್ಯವಾದ ಕುಟುಂಬ, ಬಾಲ್ಯದಿಂದಲ್ಲೂ ತಂದೆ ತಾಯಿಯೊಂದಿಗೆ ಬಡತನದಲ್ಲಿಯೇ ಬೆಳೆದು ಬಂದಿರುವ ಇವರು, ಪತ್ನಿ

ಅಯ್ಯಮ್ಮನವರೊಂದಿಗೆ ದಾಂಪತ್ಯದಲ್ಲಿ ಸೌಖ್ಯ ಕಂಡಿದ್ದಾರೆ. ಪ್ರೀತಿಯಿಂದ ನೆಮ್ಮದಿಯ ಬದುಕು ಸಾಗಿಸುತ್ತ ಅರವತ್ತಾರು ವರ್ಷಗಳ ತುಂಬು ಜೀವನವನ್ನು ಸಂತೃಪ್ತಿಯಿಂದ ದಾಟಿದ್ದಾರೆ. ಗಂಡನ ಸಾಧನೆಯ ಹಿಂದೆ ಹೆಂಡತಿಯ ಶ್ರಮ ಮತ್ತು ತ್ಯಾಗಗಳು ಇದ್ದೇ ಇರುತ್ತವೆ ಎಂಬುದು ಇವರ ಜೀವನದಲ್ಲಿಯೂ ಕಾಣಸಿಗುತ್ತದೆ. ಎಲ್ಲವನ್ನೂ ಆರ್ಥಿಕ ದೃಷ್ಟಿಯಿಂದ ನೋಡುವ ಇಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಭೌತಿಕ ಸುಖವನ್ನು ದೂರವಿಟ್ಟು ಮಾನಸಿಕ ನೆಮ್ಮದಿಗಾಗಿ ಶ್ರಮಿಸಿದ ಅಯ್ಯಮ್ಮನವರ ತ್ಯಾಗ ಇಲ್ಲಿ ಸ್ಮರಣೀಯ ನಿನ್ನೆಯ ಯೋಚನೆ ಬೇಡ, ನಾಳೆ ಯೋಚನೆ ಬೇಡ, ಇಂದು ಸಿಕ್ಕಿದ ಸುಖವನ್ನು ಆನಂದಿಸೋಣ ಎಂಬುದು ಅವರ ವಿಚಾರ. ಮನೆಯ ಹಿರಿತನದ ಜೊತೆಗೆ ಗಂಡನೊಂದಿಗೆ ಆತ್ಮ ವಿಶ್ವಾಸದ ಬದುಕನ್ನು ಹಂಚಿಕೊಂಡಿರುವ ಅವರು, ಬಂಡೆಪ್ಪನವರ ಸಾಹಿತ್ಯಕ್ಕೆ ಪರೋಕ್ಷವಾಗಿ ಪ್ರೇರಕರಾಗಿರುವು ದನ್ನು ಖೂಬಾ ಅವರು ಸ್ಮರಿಸಿಕೊಳ್ಳುತ್ತಾರೆ.

ಬಂಡೆಪ್ಪನವರದು ನೇರ ಸ್ವಭಾವ ಎಲ್ಲವನ್ನು ಬೇಗನೆ ನಂಬುವವರು. ನಡೆಯೊಂದು ನುಡಿಯೊಂದು ಎನ್ನುವ ಮಾತು ಇವರಲ್ಲಿ ಕಾಣುವು ದಿಲ್ಲ. ಒಮ್ಮೆ ಗೆಳೆತನ ಮಾಡಿದರೆ ಸಾಕು ಕುಟುಂಬದ ಸದಸ್ಯರಂತೆ ಹಚ್ಚಿಕೊಳ್ಳುತ್ತಾರೆ. ಸರಳ ಜೀವಿ, ಮೋಸ, ವಂಚನೆ, ಅಪ್ರಾಮಾಣಿಕತೆಯನ್ನು ಸಹಿಸುವವರಲ್ಲ. ಅಂತೆಯೇ ಬಂಡೆಪ್ಪನವರು ಮಕ್ಕಳಿಗೆ ಕೇವಲ ತಂದೆಯಾಗದೆ, ಸ್ನೇಹಿತರೂ ಆಗಿರುವು ದರಿಂದ, ಅವರ ಕುಟುಂಬ ಮುಕ್ತವಾಗಿ ಬದುಕು ಸಾಗಿಸುತ್ತಿದೆ. ಪು ತ್ರರಿಬ್ಬರೂ ಮತ್ತು ಪು ತ್ರಿಯರು ನಾಲ್ವರಿದ್ದು, ಎಲ್ಲರೂ ಸೌಖ್ಯವಾಗಿದ್ದಾರೆ. ಹತ್ತೊಂಬತ್ತು ಮೊಮ್ಮಕ್ಕಳನ್ನು ಕಂಡಿರುವ ಬಂಡೆಪ್ಪನವರದು ತುಂಬು ಕುಟುಂಬ. ಜೀವನದ ಪ್ರತಿಯೊಂದು ಹೆಜ್ಜೆಯನ್ನು ಆಲೋಚಿಸಿ ಇಡುತ್ತಾರೆ.

ದೇವರಲ್ಲಿ ಅಪಾರ ನಂಬಿಕೆವು ಳ್ಳವರಾಗಿದ್ದು. ಇತರರೊಂದಿಗೆ ಬಹಳ ಆತ್ಮೀಯತೆಯಿಂದ ಬೆರೆತು ಎಲ್ಲರನ್ನು ಸಮಾನ ದೃಷ್ಟಿಯಿಂದ ಕಾಣುತ್ತ ಬಾಳುತ್ತಿರುವು ದನ್ನು ಅವರ ಗೆಳೆಯರ ಬಳಗ ಮುಕ್ತಕಂಠದಿಂದ ಹೊಗುಳುವಲ್ಲಿ, ಅವರ ಸಾಹಿತ್ಯದ ಚಿಂತನೆಯ ಹಲವು ನೆಲೆಗಳಲ್ಲಿ ಗುರುತಿಸಬಹುದು.

ಈಗ ಗಡವಂತಿ ಗ್ರಾಮದಲ್ಲೇ ವಾಸವಾಗಿದ್ದುಕೊಂಡು ಕೌಟುಂಬಿಕ ಸುಖದೊಂದಿಗೆ ಆಧ್ಯಾತ್ಮಿಕ ಜೀವನ ನಡೆಸುತ್ತಿದ್ದಾರೆ. ಪ್ರಜಾಪಿತ ಬ್ರಹ್ಮಕುಮಾರಿ ಈಶ್ವರೀಯ ವಿಶ್ವವಿದ್ಯಾಲಯದ ನಿಯಮಿತ ವಿದ್ಯಾರ್ಥಿಯಾಗಿದ್ದುಕೊಂಡು ಆ ಅನುಭವವನ್ನು ಲೇಖನಗಳ ಮೂಲಕ ಪ್ರಕಟಿಸುತ್ತಿರುವರು "ವಿಶ್ವನಿರ್ಮಾಣ" ಮಾಸಿಕ ಪತ್ರಿಕೆಯಲ್ಲಿ ಮತ್ತು ಮೌಂಟು ಅಬು (ರಾಜಸ್ಥಾನ) ದಿಂದ ಪ್ರಕಟವಾಗುವ ಹಿಂದಿ ಭಾಷೆಯ "ಜ್ಞಾನಮೃತ" ಮಾಸ ಪತ್ರಿಕೆಯಲ್ಲಿ ಇವರ ಅಧ್ಯಾತ್ಮಿಕ ಅನುಭವದ ಹಲವು ಲೇಖನಗಳು ಪ್ರಕಟಗೊಂಡಿವೆ ಹಾಗೂ ಪ್ರಕಟಗೊಳ್ಳುತ್ತಿವೆ. ವಿನೋದಪ್ರಿಯರಾದ ಇವರ ಅನೇಕ ವಿನೋದದ ಸಂಗತಿಗಳು ಬೆಂಗಳೂರಿನ "ವಿನೋದ" ಮಾತಪತ್ರಿಕೆಯಲ್ಲಿಯೂ ಪ್ರಕಟವಾಗಿವೆ. ಒಟ್ಟಿನಲ್ಲಿ ಕವಿಯಾಗಿ

ಕಥೆಗಾರರಾಗಿ, ಆಧ್ಯಾತ್ಮ ಜೀವಿಯಾಗಿರುವ ಬಂಡೆಪ್ಪ ಅವರದು ಶ್ರೇಷ್ಠ ಸಾಂಸ್ಕೃತಿಕ ಜೀವನವೆಂಬುದನ್ನು ಇಲ್ಲಿ ಗಮನಿಸಬಹುದು.

*** ವೃತ್ತಿ ಜೀವನ :**

ಬಂಡೆಪ್ಪ ಅವರ ವೃತ್ತಿ ಜೀವನವು ಅವಗ ಇಪ್ಪತ್ತೊಂದನೇ ವಯಸ್ಸಿನಲ್ಲಿ ಅಂದರೆ ೧೯೫೮ರ ಅಕ್ಟೋಬರ್ ತಿಂಗಳಿನಿಂದ ಪ್ರಾರಂಭಗೊಂಡು ೧೯೯೬ರ ಜುಲೈವರೆಗೆ ಸಾಗಿ ಬಂದಿದೆ. ಅವರ ಈ ಮೂವತ್ತೆಂಟು ವರ್ಷಗಳ ವೃತ್ತಿ ಜೀವನವು ಸಂತೃಪ್ತಿದಾಯಕವಾಗಿ ಸಾಗಿ ಹೋಗಿರುವುದನ್ನು ಅರಿಯಬಹುದು.

ಪ್ರಾಥಮಿಕ ಶಾಲಾ ಶಿಕ್ಷಕನಾಗಿ ಸೇವೆ ಸಲ್ಲಿಸುತ್ತಿದ್ದಾಗ ಇವರ ಭೋಧನೆಯ ಸಾಮರ್ಥ್ಯವನ್ನು ಮೆಚ್ಚಿ ಮುಖ್ಯೋಪಾಧ್ಯಾಯರು ಹೈಸ್ಕೂಲಿಗೆ ಡೆಪ್ಯುಟೇಷನ್ ಮಾಡಿಸಿಕೊಂಡು ಹತ್ತನೆ ವರ್ಗದ ವಿದ್ಯಾರ್ಥಿಗಳಿಗೆ ಹಿಂದಿ ಭಾಷೆ ಕಲಿಸುವ ಜವಾಬ್ದಾರಿ ವಹಿಸಿದರು. ಅದನ್ನು ಅತ್ಯಂತ ಸಮರ್ಥವಾಗಿ ನಿಭಾಯಿಸಿಕೊಂಡು ಬಂದುದಲ್ಲದೆ, ವಿದ್ಯಾರ್ಥಿಗಳ ಮತ್ತು ಮುಖ್ಯೋಪಾಧ್ಯಾಯರ ಮೆಚ್ಚುಗೆಗೆ ಪಾತ್ರರಾದ ಶಿಕ್ಷಕರೆನಿಸಿರುವುದನ್ನು ಇಲ್ಲಿ ನೆನೆಯಬಹುದು.

೧೯೬೪ರಲ್ಲಿ ಒಂದು ವರ್ಷದ ಟ್ರೈನಿಂಗನ್ನು ಯಶಸ್ವಿಯಾಗಿ ಮುಗಿಸುವುದರ ಜೊತೆಯಲ್ಲಿ ಅನೇಕ ಸಾಂಸ್ಕೃತಿಕ, ಸಾಹಿತ್ಯಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ತಮ್ಮ ಅನುಭವವನ್ನು ಭಾಷಣ ಹಾಗೂ ಲೇಖನಗಳ ಮೂಲಕ ಪ್ರಕಟಗೊಳಿಸಲು ಆರಂಭಿಸಿದರು. ೧೯೭೦ರಲ್ಲಿ ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಪಕರನ್ನಾಗಿ ವರ್ಗಾಯಿಸಿದ ನಂತರ ೧೯೭೭ ರವರೆಗೆ ಕನಕಟ್ಟಾ ಗ್ರಾಮದಲ್ಲಿ ಸೇವೆ ಸಲ್ಲಿಸಿ ನಂತರ ಹುಮನಾಬಾದಿನ ಕನ್ಯಾ ಪ್ರಾಥಮಿಕ ಶಾಲೆಗೆ ಆಗಮಿಸಿ, ಅನೇಕ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದರೊಂದಿಗೆ ಹುಮನಾಬಾದಿನ ಗುರುಭವನ ನಿರ್ಮಾಣದ ಜವಾಬ್ದಾರಿಯನ್ನು ಹೊತ್ತುಕೊಂಡು ಅದರ ಅಭಿವೃದ್ಧಿಯಲ್ಲಿ ಪ್ರಮುಖರೆನಿಸಿದರು.

ಶಿಕ್ಷಕ ವೃತ್ತಿಯಲ್ಲಿ ಸೇವೆ ಸಲ್ಲಿಸುತ್ತಾ ಹುಮನಾಬಾದ ತಾಲೂಕಾ ಶಿಕ್ಷಕರ ಸಂಘದ ಅಧ್ಯಕ್ಷರಾಗಿ, ಹುಮನಾಬಾದ ತಾಲೂಕಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ಗುರುಭವನ ನಿರ್ಮಾಣ ಸಮಿತಿಯ ಕೋಶಾಧ್ಯಕ್ಷರಾಗಿ, ತಮ್ಮ ಸಮಯವನ್ನು ಸದುಪಯೋಗಿಸಿಕೊಂಡು ಸಾಮಾಜಿಕ ಸೇವೆಯಲ್ಲಿ ತೊಡಗಿಸಿಕೊಂಡರು. ೧೯೮೩ ರಲ್ಲಿ ಬಂಡೆಪ್ಪನವರಿಗೆ ಪ್ರಾಥಮಿಕ ಶಾಲಾ ಶಿಕ್ಷಕ ವೃತ್ತಿಯಿಂದ ಪ್ರೌಢಶಾಲಾ ಶಿಕ್ಷಕನೆಂದು ಬಡ್ತಿ ದೊರೆಯಿತು. ಇವರ ಬೋಧನಾ ಸಾಮರ್ಥ್ಯ ಹಾಗೂ ಆಳವಾದ ಅಧ್ಯಯನದ ರೀತಿಯನ್ನು ಗಮನಿಸಿದ ಅಲ್ಲಿನ ಪ್ರಾಚಾರ್ಯರು ಸರಕಾರಿ ಪದಪಿ ಪೂರ್ವ ಕಾಲೇಜಿನ ಪಿ.ಯು.ಸಿ. ವರ್ಗದ ವಿದ್ಯಾರ್ಥಿಗಳಿಗೆ ಕನ್ನಡ ಭಾಷೆಯನ್ನು ಕಲಿಸುವ ಜವಾಬ್ದಾರಿಯನ್ನು ಹೊರಿಸಿದಾಗ ಅದನ್ನು

ತಮ್ಮ ವಿದ್ಯಾರ್ಹತೆಗೆ ಮತ್ತು ಯೋಗ್ಯತೆಯ ಮೇರೆಗೆ ಸಮರ್ಥವಾಗಿ ನಡೆಸಿಕೊಟ್ಟು ವಿದ್ಯಾರ್ಥಿಗಳಿಂದ ಮೆಚ್ಚುಗೆಯನ್ನು ಪಡೆದರು.

೧೯೯೧-೯೨ ನೇ ಸಾಲಿನಲ್ಲಿ ಗಡವಂತಿ (ಸ್ವಗ್ರಾಮ) ಗ್ರಾಮದಲ್ಲಿ ಹೈಸ್ಕೂಲು ಪ್ರಾರಂಭಗೊಂಡು ಶಿಕ್ಷಕರ ಕೊರತೆ ಇದ್ದುದನ್ನು ಗಮನಿಸಿ ಗ್ರಾಮದವರು ತಮ್ಮ ಹಿತದೃಷ್ಟಿಯಿಂದ ಬಂಡೆಪ್ಪನವರನ್ನು ವರ್ಗಾಯಿಸಲು ಬೇಡಿಕೊಂಡಾಗ ೧೯೯೩ ರಲ್ಲಿ ತನ್ನೂರು ಗಡವಂತಿ ಗ್ರಾಮದ ಹೈಸ್ಕೂಲಿಗೆ ವರ್ಗಾಯಿಸಿದರು. ಅವರು ಬಂದ ಎರಡು ವರ್ಷಗಳಲ್ಲಿ ಗಡವಂತಿ ಪ್ರೌಢಶಾಲೆಯು ಬೀದರ ಜಿಲ್ಲೆಯ ಅತ್ಯುತ್ತಮ ಪ್ರೌಢಶಾಲೆಯ ಪಂಕ್ತಿಯಲ್ಲಿ ಸೇರಿಕೊಂಡಿತು. ಇದಕ್ಕೆ ಮುಖ್ಯ ಕಾರಣ ಇವರ ಪ್ರಾಮಾಣಿಕ ಪ್ರಯತ್ನ ಇದರಿಂದಲೇ ೧೯೯೪ರಲ್ಲಿ ಅವರಿಗೆ **'ಬೀದರ ಜಿಲ್ಲೆಯ ಅತ್ಯುತ್ತಮ ಶಿಕ್ಷಕ ಪ್ರಶಸ್ತಿ'** ದೊರೆಯಿತು. ೧೯೯೬ರಲ್ಲಿ ತನ್ನೂರಿನಲ್ಲಿಯೇ ನಿವೃತ್ತಿ ಹೊಂದಿದ ಇವರದು ಪರಿಪೂರ್ಣ ವೃತ್ತಿ ಜೀವನ ಎನ್ನಬಹುದು.

ಬಂಡೆಪ್ಪನವರಲ್ಲಿಯ ಅಗಾಧವಾದ ಬುದ್ಧಿ ಸಾಮರ್ಥ್ಯ ಮತ್ತು ಕವಿ ಮನಸ್ಸಿನ ಪ್ರಾಮಾಣಿಕತೆಗೆ ಅವರ ವೃತ್ತಿ ಜೀವನವು ಸಾಕ್ಷಿಯಾಗಿ ನಿಂತಿದೆ. ವೃತ್ತಿ ಮತ್ತು ಸ್ವಂತ ಜೀವನದ ಅನುಭವಗಳೇ ನಿವೃತ್ತರಾದ ಮೇಲೆ ಸಾಹಿತ್ಯ ಕೃತಿಗಳ ಮೂಲಕ ಅಭಿವ್ಯಕ್ತಗೊಂಡು ಕಥೆ, ಕವನ, ಖಂಡಕಾವ್ಯ ಹಾಗೂ ವಚನಗಳಂತಹ ಸಾಹಿತ್ಯ ಸ್ವರೂಪಗಳ ಮೂಲಕ ಹೊರಹೊಮ್ಮಿ ನಿಂತಿವೆ. ಅವುಗಳು ಒಬ್ಬ ವ್ಯಕ್ತಿಯ ವೈಯಕ್ತಿಕ ಅನುಭವಗಳಷ್ಟೇ ಆಗಿ ನಿಲ್ಲದೆ ಒಂದು ಸಮಾಜದ ಒಂದು ಜನಾಂಗದ ಸಾಂಸ್ಕೃತಿಕ ಪ್ರತಿನಿಧಿಯಾಗಿ ನಿಲ್ಲುವುದರಿಂದ ಶ್ರೀ ಬಂಡೆಪ್ಪ ಖೂಬಾ ಅವರ ಸಾಹಿತ್ಯದ ಅಧ್ಯಯನ ಇಲ್ಲಿ ಅತ್ಯಂತ ಪ್ರಮುಖವಾಗುತ್ತದೆ ಎನ್ನಬಹುದು. ಅವರ ಒಟ್ಟು ಸಾಹಿತ್ಯವನ್ನು ಅವರದೇ ಆದ ಹಲವು ಚಿಂತನೆಗಳ ಹಿನ್ನಲೆಯಲ್ಲಿ ಮುಂದಿನ ಅಧ್ಯಾಯಗಳಲ್ಲಿ ಗುರುತಿಸಲಾಗಿದೆ.

*** ಸಾಹಿತ್ಯಿಕ ಜೀವನ :**

ವಿದ್ಯಾರ್ಥಿ ದೇಸೆಯಿಂದಲೇ ಉತ್ತಮವಾದ ಕವಿತೆಗಳನ್ನು ರಚಿಸಿದ ಬಂಡೆಪ್ಪ ಅವರು ಬೀದರ ಜಿಲ್ಲೆಯ ಪ್ರಾತಿನಿಧಿಕ ಕವಿ, ಕಥೆಗಾರ, ಅನುವಾದಕ ಹಾಗೂ ಜನಪರ ಸಾಹಿತಿಯಾಗಿ ರೂಪಗೊಂಡಿದ್ದನ್ನು ಅವರ ಸಾಹಿತ್ಯದ ಹಿನ್ನಲೆಯಲ್ಲಿ ಗುರುತಿಸಬಹುದು.

"ಮಧ್ಯದಲ್ಲಿ ಹತ್ತಾಗಿ ಬರೆಯುವುದನ್ನು ನಿಲ್ಲಿಸಿಬಿಟ್ಟರು ಜೀವನದ ಜಂಜಡದಲ್ಲಿ ಸಿಲುಕಿದ ಶ್ರೀಯುತರು ಆದರಿಂದ ಮೇಲೆದ್ದು ಮತ್ತೆ ಸೃಜನಾತ್ಮಕ ಕ್ರಿಯೆಯಲ್ಲಿ ತೊಡಗಬಹುದೆಂಬ ನಂಬಿಗೆಗೆ ಇಂಬಿಲ್ಲವಾಗಿತ್ತು. ಆದರೆ ದೈವಲೀಲೆ ವಿಚಿತ್ರವಾದುದು. ಸುಮಾರು ವರ್ಷಗಳವರೆಗೆ ಕಾವ್ಯಲೋಕದಿಂದ ದೂರವಾಗಿದ್ದ ಶ್ರೀ ಖೂಬಾ ಅವರು ಮತ್ತೆ

ಕಾವ್ಯ ಪ್ರಪಂಚದಲ್ಲಿ ಬರೀ ಕಾಲಿಡದೇ, ಕಾವ್ಯಲೋಕದಲ್ಲಿ ದಟ್ಟವಾದ ಹೆಜ್ಜೆಗೆ ಹೆಜ್ಜೆಗಳನ್ನು ಮೂಡಿಸಿ ರಸೀಕರಿಗೆ ಕಾವ್ಯ ರಸಾಯನವನ್ನು ಉಣಬಡಿಸಿದ್ದಾರೆ''[1] ಎಂದು ಹಿರಿಯ ಸಾಹಿತಿಯೊಬ್ಬರು ಹೇಳಿದ್ದನ್ನು ಗಮನಿಸಿದರೆ, ಸ್ವಲ್ಪ ಕಾಲ ಇವರು ಬರೆಯಲಿಲ್ಲ. ಹಲವು ಸಮಸ್ಯೆಗಳನ್ನು ಎದುರಿಸಲು ಅವರು ಹೆಣಗಿದರು. ಈ ಮಾತು ಕವಿಯಾಗಿ ರೂಪುಗೊಳ್ಳಲು ತೊಡಗಿದ್ದ ಸಂದರ್ಭದಲ್ಲಿ ಒತ್ತಡಕ್ಕೆ ಸಿಲುಕಿ ಬರೆಯುವುದಕ್ಕೆ ನಿಲ್ಲಿಸಿದ ಸಂಗತಿಯನ್ನು ನಾವಿಲ್ಲಿ ಅರಿಯಬಹುದು.

ಖೂಬಾರವರು ಸಾಹಿತ್ಯ ಕ್ಷೇತ್ರಕ್ಕೆ ಕಾಲಿಟ್ಟಿದ್ದು ಕಾವ್ಯದ ಮುಖಾಂತರ ಶ್ರೀ ಎಸ್.ಎಸ್. ಬಾಣದ ಅವರ ಪ್ರೇರಣೆಯಿಂದ 'ಅನುತ್ತರನ ಪೌರುಷ' ಎಂಬ ಪದ್ಯವನ್ನು ಭಾಮಿನಿ ಷಟ್ಪದಿಯಲ್ಲಿ ಮತ್ತು ಶ್ರೀ ಬಸವಲಿಂಗಯ್ಯ ಮಲ್ಲಾಪೂರದ ಪ್ರೇರಣೆಯಿಂದ 'ಅಳುನಗೆ' ಎಂಬ ಸ್ವರಚಿತ ಕವನ ಬರೆಯುಪ ಮೂಲಕ ಇವರ ಕಾವ್ಯ ಜೀವನ ಆರಂಭಗೊಂಡಿತು. ಅದು ವಿದ್ಯಾರ್ಥಿಯಾಗಿದ್ದಾಗ ಪಿ.ಯು.ಸಿ. ಓದುತ್ತಿರುವಾಗ ಕಾಲೇಜಿನಲ್ಲಿ ಏರ್ಪಡಿಸಿದ ಕವಿತಾ ಸ್ಪರ್ಧೆಯಲ್ಲಿ 'ಶಾಂತಿ ಹೇಗೆ ಸಾಧ್ಯವಿಲ್ಲ'? ಎಂಬ ಕವಿತೆ ಬರೆದು ಪ್ರಥಮ ಸ್ಥಾನ ಗಿಟ್ಟಿಸಿದ್ದು, ಅವರು ಕವಿಯಾಗಿ ರೂಪಗೊಳ್ಳಲು ಪ್ರೋತ್ಸಾಹ ದೊರಕಿತು. ನಂತರ ಬಂಡೆಪ್ಪನವರ ಕಾವ್ಯಕ್ರಿಯೆಗೆ ಪ್ರೇರಣೆಗಳೆಂದರೆ, ಅವರು ಎದುರಿಸಿದ ಬಡತನ, ಸಮಕಾಲೀನ ಸಮಾಜ, ಸಾಮಾಜಿಕ ಸಂಘರ್ಷಗಳು, ವೃತ್ತಿ ಜೀವನ ಮುಂತಾದ ಸಂಗತಿಗಳು ಅವುಗಳನ್ನು ಕಾವ್ಯಕ್ರಿಯೆಗಿಳಿಸುವ ಪ್ರಯತ್ನವನ್ನು ಪ್ರಮಾಣಿಕವಾಗಿ ಮಾಡಿದ್ದು ಅವರ ಕೊಡುಗೆ ಎನ್ನಬಹುದು. ಇಲ್ಲೆಲ್ಲ ಇವರ ಕಾವ್ಯದ ಕಾಳಜಿ ಸಮೂಹದ ಪರಧಿಯೊಳಗೆ ಸಮಷ್ಟಿ ಬದುಕಿನ ಮೂಲಗಳನ್ನು ಅಭಿವ್ಯಕ್ತಿಯ ತೆಕ್ಕೆಗೆ ಗುರಿಪಡಿಸುವುದಾಗಿ ಕಾಣಿಸಿಕೊಳ್ಳುತ್ತದೆ.

ವೃತ್ತಿಯಿಂದ ಶಿಕ್ಷಕರಾಗಿದ್ದುಕೊಂಡು ಪ್ರವೃತ್ತಿಯಿಂದ ಕವಿಗಳಾಗಿ ಬೆಳೆದ ಇವರು, ತಮ್ಮ ಹದಿನೆಂಟನೇ ವರ್ಷದಿಂದಲೇ ಬರೆಯುತ್ತಾ ಬಂದಿದ್ದರೂ ಅವುಗಳನ್ನು ಪ್ರಕಟಗೊಳಿಸಿದ್ದು ೧೯೯೫ ರಲ್ಲಿ ಇಳಿವಯಸ್ಸಿನಲ್ಲಿದ್ದ ಈ ಅವಧಿಯಲ್ಲಿ ಇವರು ತಮ್ಮ ಕಾವ್ಯ ಸ್ವರೂಪವನ್ನು ಸರಿಯಾಗಿ ಕಂಡುಕೊಂಡಿರುವುದನ್ನು ಪ್ರಥಮ ಕವನ ಸಂಕಲನ ಕೃತಿ ಸಾರುತ್ತದೆ.

ಅವರ ಸಾಹಿತ್ಯದ ಬೆಳವಣಿಗೆಯಲ್ಲಿ ಅವರ ಕೃತಿಗಳ ಪ್ರಕಟಣೆಯ ಹಿನ್ನಲೆಯಲ್ಲಿ ಈ ಕೆಳಗಿನಂತೆ ಗುರುತಿಸಿ ಅವುಗಳ ಸ್ವರೂಪವನ್ನು ಕಂಡುಕೊಳ್ಳಬಹುದು.

---

ಅಡಿಟಿಪ್ಪಣಿ :

೧' ಅಳುನಗೆಯ ಸುಳಿಯಲ್ಲಿ ಪೆದ್ದಜಿಮ್ಮ'-೧೯೯೫ ಪುಟ-VIII ಡಾ|| ಮಾಣಿಕರಾವ ಧನಶ್ರೀ(ಅಭಿಪ್ರಾಯ)

**ಪ್ರಕಟಿತ ಕೃತಿಗಳು:**

೧. ಅಳುನಗೆಯ ಸುಳಿಯಲ್ಲಿ ಪೆದ್ದಜಿಮ್ಮ (ಖಂಡಕಾವ್ಯ) ೧೯೯೫

೨. ಐವತ್ತೆಂಟರಲ್ಲಿ ಅನುತ್ತರನ ಪೌರುಷ (ಕವನ ಸಂಕಲನ) ೧೯೯೫

೩. ಪುರಸ್ಕಾರ (ಹಿಂದೀ ಭಾಷೆಯಿಂದ ಅನುವಾದಿಸಿದ ಕಥಾ ಸಂಕಲನ) ೧೯೯೬

೪. ಬಿಂಬ ಪ್ರತಿ ಬಿಂಬ (ಕಥಾ ಸಂಕಲನ) ೧೯೯೭

೫. ಯುಗವಾಣಿ (ಪ್ರಬಂಧ ಕಾವ್ಯ) ೧೯೯೮

೬. ಶತಕಾಂತ್ಯದ ವಚನ ಶತಕ (ಆಧುನಿಕ ವಚನಗಳು)೨೦೦೧

೭. ಧರಿನಾಡಿನ ಗಂಡುಗಲಿ ರಾಮ (ಜೀವನ ಚರಿತ್ರೆ)೨೦೦೨

೮. ವಿಶ್ವ ವಿಖ್ಯಾತ ಬಿದ್ರಿ ಕಲಾ (ಹಿಂದೀ ಅನುವಾದ) ೨೦೦೪.

**ಅಪ್ರಕಟಿತ ಕೃತಿಗಳು:-**

೧. ವೀರಶೈವ ವಚನ ಸುಧಾ (ಹನ್ನೆರಡನೆಯ ಶತಮಾನದ ೯೦ ವಚನಕಾರರ ಮತ್ತು ೨೧ ವಚನಾಕಾರ್ತಿಯರ ವಚನಗಳಿಂದ ಆಯ್ಕೆ ಮಾಡಿದ ೫೪೧ ವಚನಗಳ ಹಿಂದೀ ಅನುವಾದ)

೨. ಡಾ।। ಎಸ್.ಎಂ. ಹಿರೇಮಠ "ಕನ್ನಡ ಸಾಹಿತ್ಯದಲ್ಲಿ ಜ್ಞಾನಪೀಠ ಪ್ರಶಸ್ತಿ ವಿಜೇತರರು" ಎಂಬ ಕೃತಿಯ ಹಿಂದೀ ಅನುವಾದ.

೩. ಸುಮಾರು ೧೫೦ ಕವನಗಳು.

೪. ಕಥಾ ಭಾರತಿ (ಭಾರತದ ೧೯ ಭಾಷೆಗಳ ಉತ್ತಮ ಕಥೆಗಳನ್ನು ಹಿಂದೀ ಭಾಷೆಯ ಮುಖಾಂತರ ಕನ್ನಡಕ್ಕೆ ಅನುವಾದ)

೫. ಕನ್ನಡ ಹಿಂದೀ ಕಾವ್ಯಧಾರೆ (ಆಧುನಿಕ ಕನ್ನಡ ಮತ್ತು ಹಿಂದೀ ಕಾವ್ಯಗಳ ತೌಲನಿಕ ಅಧ್ಯಯನ)

೬. ಹಿಂದೀಯಿಂದ ಅನುವಾದಿಸಿದ ಕವನಗಳು ಹಾಗೂ ಬಿಡಿ ಲೇಖನಗಳು ಇವೆ.

**೧. ಅಳುನಗೆಯ ಸುಳಿಯಲ್ಲಿ ಪೆದ್ದಜಿಮ್ಮ :**

೧೯೯೫ ರಲ್ಲಿ ಪ್ರಕಟಗೊಂಡಿರುವ ಇದು ಪ್ರತಿಪಾದದಲ್ಲಿ ೧೨ ಮಾತ್ರೆಗಳ ನಾಲ್ಕು ಗಣಗಳ ಉತ್ಸಾಹ ರಗಳೆ ದಾಟಿಯನ್ನು ಅನುಸರಿಸಿ ಮೂಡಿ ನಿಂತಿದೆ. 'ಮಂಕುತಿಮ್ಮನ ಕಗ್ಗ' ಮತ್ತು 'ಮರುಳಸಿದ್ದನ ಕಾವ್ಯ' ಮಾದರಿಯಲ್ಲಿ ರಚಿಸಿದ ಇದರಲ್ಲಿ ೩೦೩ ಚೌಪದಿಗಳಿದ್ದು, ಇದು ಖಂಡ ಕಾವ್ಯ ಎನಿಸುತ್ತದೆ. ಈ ಕೃತಿಯಲ್ಲಿಯ ಪೆದ್ದಜಿಮ್ಮನ ಪರಿಕಲ್ಪನೆ ಕುತೂಹಲಕಾರಿಯಾಗಿ ಮೂಡಿ ನಿಂತಿರವುದನ್ನು ಮೊದಲು ವಿವೇಚಿಸಬಹುದು.

**ಪೆದ್ದಜಿಮ್ಮ:**

ಇಲ್ಲಿಯ "ಪೆದ್ದ ಜಿಮ್ಮನಿಗೆ ಮಂಕುತಿಮ್ಮ ಹಾಗೂ ಮರುಳಸಿದ್ದರ ಪ್ರಭಾವವಾಗಿರುವುದನ್ನು ಕವಿಯೇ ಹೇಳಿಕೊಂಡಿದ್ದಾರೆ. ಅದಕ್ಕೆ ತಮ್ಮತನವನ್ನು ಸೇರಿಸಿಕೊಂಡು ಆ ಭಾವನೆ ಇಟ್ಟುಕೊಂಡಿದ್ದರೂ ಸಹ ಇವರ ರಚನೆ ಅದೇ ಜಾಡಿನಲ್ಲಿ ಸಾಗುವುದಿಲ್ಲವೆಂಬುವುದು ಗಮನಾರ್ಹ ಅಂಶ. ಹಾಗಂತ ಇದನ್ನು ಸ್ವಂತ ಸೃಷ್ಟಿಯೂ ಎನ್ನುವುದಿಲ್ಲ. ಪೂರ್ಣ ಪರಾವಲಂಬಿಯಾಗಿಯೂ ಎನ್ನುವಂತೆ ಇಲ್ಲ. ಕವಿಯು ಕೇವಲ ಅನುಕರಣಶೀಲನಾಗದೇ ಅವೆಲ್ಲವುಗಳನ್ನು ಅರಗಿಸಿಕೊಂಡು ತನ್ನ ಖಚಿತ ಅಭಿಪ್ರಾಯ ಮತ್ತು ಔಚಿತ್ಯದೊಂದಿಗೆ 'ಪೆದ್ದಜಿಮ್ಮ'ನನ್ನು ಪರಿಕಲ್ಪಿಸಿಕೊಂಡದ್ದು ಎದ್ದು ಕಾಣುತ್ತದೆ. ಕಾವ್ಯ ರಚಿಸುವಾಗ ಕವಿಯ ಅನುಭವ ಹಾಗೂ ಆಶಾವಾದದ ಜೊತೆಗೆ ಅಧ್ಯಯನದ ಆಸಕ್ತಿಗಳು ಮೈಗೂಡಿಕೊಂಡು ಇನ್ನಿತರರ ಸಾಲಿಗೆ ಸೇರದೆ ತಮ್ಮ ಸ್ವಂತಿಕೆಯನ್ನು ಪ್ರದರ್ಶಿಸಿದ್ದು, ವಿನೂತನ ಪ್ರಯೋಗವೆನ್ನಬಹುದು." ಈ ಹಿನ್ನೆಲೆಯಲ್ಲಿ ಈ ಕಾವ್ಯಕ್ಕೆ ಒಂದು ವಿಶಿಷ್ಟ ಸ್ಥಾನ ಸಿಗುತ್ತದೆ. ಎಂಬುದನ್ನು ಹಲವು ಉದಾಹರಣೆಗಳಿಂದ ಗುರುತಿಸಬಹುದು.

"ಮಂಕುತಿಮ್ಮ ಮರುಳಸಿದ್ದ
ರಂತೆ ಅನುಭವಗಳ ಯುದ್ಧ
ಸ್ತರದ ಜ್ಞಾನ ಮೂಡಿಸುತ್ತ
ಸ್ಥಿರದಿ ಬಾಳು ಪೆದ್ದಜಿಮ್ಮ" (ಅ.ನ.ಸು.ಪೆ.೭೦) ಪು –೧೪

ಇಲ್ಲಿಯ ಪೆದ್ದಜಿಮ್ಮ ಬುದ್ಧಿಮಂದನಲ್ಲ ಏನನ್ನು ಅರಿಯದವನಲ್ಲ ಎಲ್ಲವುಗಳನ್ನು ಅರಿತು ಸುಮ್ಮನಾಗಿರುವ ಮಹಾಮೌನಿ. ವಿನಮ್ರತೆ, ಸೌಜನ್ಯದಿಂದಲೇ ತನ್ನ ಅನುಭವಗಳನ್ನು ಹಂಚಿಕೊಳ್ಳುವ ಜಾಣ. ದಡ್ಡರಿಗೆ ದಡ್ಡನಂತೆ, ಜಾಣರಿಗೆ ಜಾಣನಂತೆ ಕಾಣುವ ಜಿಮ್ಮ ಕವಿಯ ಹೃದಯವೀತ. ಈ ಜಾಣತನದ ಬದುಕೆ ಇಲ್ಲೆಲ್ಲಾ ಪ್ರಸ್ತುತಗೊಂಡಿರುವುದನ್ನು ಎಲ್ಲೆಲ್ಲೂ ಗುರುತಿಸಬಹುದು.

ಈ ಕೃತಿಯ ಸಮಕಾಲೀನ ಬದುಕಿನೊಂದಿಗೆ ಸಾರ್ವತ್ರಿಕ ಬದುಕಿನ ಸತ್ಯವನ್ನು ಪ್ರಸ್ತುತ ಪಡಿಸುವ ಜೀವನದ ವಾಸ್ತವತೆಯನ್ನು ಮಾರ್ಮಿಕವಾಗಿ ತಿಳಿಹೇಳುತ್ತದೆ. ಅಳುವಿನಿಂದಲೇ ಪ್ರಾರಂಭಗೊಳ್ಳುವ ಮಾನವ ಬದುಕಿನ ಆರಂಭ ಸೂಚಿಸಿ, ಬದುಕಿನ ಸ್ಥಿತಿಗೆ ಕನ್ನಡಿ ಹಿಡಿಯುತ್ತದೆ.

ಪ್ರತಿಯೊಬ್ಬ ಮಾನವ ಜನಿಸುವಾಗ ಅಳುತ್ತಲೇ ಹೊರ ಬರುತ್ತಾನೆ. ಇದರಿಂದ ಬದುಕಿನ ಆರಂಭ ದುಃಖದಿಂದ ಕೂಡಿರುತ್ತದೆ. ಆದರೆ ಬದುಕಿನ ಸ್ಥಿತಿ ಸುಖಾಂತ್ಯವಾಗಿರುತ್ತದೆ.

---
ಅಡಿಟಿಪ್ಪಣಿ:

೨ ಅಳು ನಗೆಯ ಸುಳಿಯಲ್ಲಿ ಪೆದ್ದಜಿಮ್ಮ–೧೯೯೫ ಡಾ||ಎಸ್.ಎಂ. ಹಿರೇಮಠ ಪ್ರಾಸ್ತಾವಿಕ ಮುನ್ನುಡಿ

೩ ಅಳು ನಗೆಯ ಸುಳಿಯಲ್ಲಿ ಪೆದ್ದಜಿಮ್ಮ–೧೯೯೫ ಪುಟ–೧೪ ಪದ್ಯ ೭೦

ಅಳುತ್ತಲೇ ಪ್ರವೇಶಿಸಿದರು ಜೀವನದಲ್ಲಿ ನಮಗಾಗಿ ಅಳುತ್ತಿರಲೂ ನಾವು ಮೌನ ಧರಿಸಲೇಬೇಕು. ಬರುವಾಗ ನಾವು ಅತ್ತರೂ ಹೋಗುವಾಗ ನೀವು ಅಳುತ್ತೀರುವಿರಿ ಇರುವವರೆಗೂ ನಗುತ್ತಾ ಬಾಳೋಣ ಎಂಬುದು ಕವಿಯ ಆಶೆ. ಹೀಗೆ ಅಳುನಗೆಯ ಚಕ್ರದಲ್ಲಿ ತಿರುಗುತ್ತಿರುವ ಬದುಕು ಅಳು ನುಂಗಿ ಪರರನ್ನು ನಗಿಸುವಲ್ಲಿ ಸಾರ್ಥಕತೆಯನ್ನು ಪಡೆಯಬೇಕು. ಇದೇ ಪೆದ್ದಜಿಮ್ಮನ ಮೂಲ ಆಶಯ.

ಈ ಕಾವ್ಯದ ಎಲ್ಲಾ ಚೌಪದಿಗಳನ್ನು ಪ್ರತಿ ಪದವನ್ನು ದನಿ ಎತ್ತಿ ಹಾಡಬಹುದು. ಸಂಗೀತದ ಚೌಕಟ್ಟಿಗೆ ಅಳವಡಿಸಬಹುದು ಚಿಂತನೆಗೊಳಪಡಿಸಬಹುದು. ಮನಸ್ಸಿಗೆ ಆಹ್ಲಾದವನ್ನುಂಟು ಮಾಡುವ, ಹೃದಯಕ್ಕೆ ರಸಃನನ್ನುಣಿಸಬಹುದು, ಒಟ್ಟಿನಲ್ಲಿ ಮನದ ಕತ್ತಲೆಯನ್ನು ಓಡಿಸಿ, ಅರಿವಿನ ಬೆಳಕನ್ನುಂಟು ಮಾಡುವುದೇ ಪೆದ್ದಜಿಮ್ಮನ ಉದ್ದೇಶವಾಗಿರುವುದನ್ನು ಇಲ್ಲಿಯ ಎಲ್ಲಾ ಪದ್ಯಗಳಲ್ಲಿ ಗುರುತಿಸಬಹುದು.

"ಬೆಳಕಿನಲ್ಲಿ ಬೆಳಕು ಆಗಿ
ಬೆಳಕು ಬಯಲಿನಲ್ಲಿ ಅಡಗಿ
ಬೆಳಕು ಆಗಿ ಕೊನೆಯವರೆಗೆ
ಬೆಳಗುವುದು ಪೆದ್ಧಜಿಮ್ಮ" (ಅ.ನ.ಸು.ಪೆ--೩೦೩) ಪು –೪೭

ಇದು ಪೆದ್ದಜಿಮ್ಮನ ಕಾಲದ ಧ್ಯೇಯವಾಗಿರುವುದಲ್ಲದೆ ಅವನ ಬದುಕಿನ ಧ್ಯೇಯವೂ ಆಗಿದೆ. ಹಾಗೂ ಈ ಕಾವ್ಯದ ಮುಖ್ಯ ಉದ್ದೇಶವೂ ಇದೆ ಅಗಿರುವಂತಿದೆ. ಒಟ್ಟಿನಲ್ಲಿ ಪೆದ್ದಜಿಮ್ಮ ನಮ್ಮ ಮುದ್ದು ಕವಿಯು ಹೌದು. ವಿಮರ್ಶಕನೂ ಹೌದು. ಒಮ್ಮೊಮ್ಮೆ ಇಡೀ ಬದುಕನ್ನು ಅನುಭವದ ಮೂಲಕ ಅರಿಯುವ ಸಹೃದಯನೂ ಆಗುತ್ತಾನೆ.

ಒಟ್ಟು ಬದುಕಿನ ಹಿಂದು ಮುಂದುಗಳನ್ನು ಏರು–ಇಳಿತಗಳನ್ನು, ಆಳ–ಅಗಲ, ಎತ್ತರ–ಬಿತ್ತರಗಳನ್ನು, ಸಂಕೀರ್ಣ ಸರಳತೆಗಳನ್ನು, ಶಿಥಿಲತೆ–ಸರಳತೆಗಳನ್ನು, ನೀತಿ–ತತ್ವಗಳನ್ನು, ವೈರುಧ್ಯ–ವಿಪರ್ಯಾಸಗಳನ್ನು ತಿಳಿಸಿ ಚರ್ಚಿಸಿ, ಇಲ್ಲಿ ಚಿಂತನೆಗೊಳಪಡಿಸಲಾಗಿದೆ. ಹೇಳುವ ರೀತಿ ಸರಳವಾಗಿದ್ದು, ಓದುಗನ ಮನಸ್ಸಿಗೆ ಹಿಡಿಸುತ್ತನೆ. ತಮ್ಮ ಅನುಭವಗಳಿಗೆ ನೇರ ಅಭಿವ್ಯಕ್ತಿ ಕೊಡುವ ಭಾವ, ಭಾಷೆ ಇಲ್ಲಿ ಗಮನಾರ್ಹವಾಗಿ ನಿಲ್ಲುತ್ತಿರುವುದನ್ನು ಅರಿಯಬಹುದು. ಒಟ್ಟಿನಲ್ಲಿ ಬದುಕಿನ ಹಲವು ಮಗ್ಗುಲುಗಳನ್ನು ತೋರಿಸುವ ಈ ಕಾವ್ಯವು ವಸ್ತು, ಭಾವ ಭಾಷೆಗಳ ತ್ರಿವೇಣಿ ಸಂಗಮವಾಗಿದ್ದು, ಜನಪರ ಧೋರಣೆ ಹೊಂದಿ ನಿಂತಿದೆ. ಈ ಕೃತಿಯನ್ನು ಸಾದ್ಯಂತವಾಗಿ ಗಮನಿಸಿರುವ ಡಾಃ ಎಮ್.ಎಮ್. ಕಲ್ಬುರ್ಗಿಯವರು "ಖೂಬಾರವರಲ್ಲಿ ಹುದುಗಿರುವ ಕವಿಯನ್ನು ಗುರುತಿಸಿ ನಿಮ್ಮ ಈ ಕೃತಿಯು ನಿಮ್ಮ ಸಾಮಾಜಿಕ ಪ್ರಜ್ಞೆಗೆ ಸಾಕ್ಷಿಯಾಗಿದ್ದು, ಹೈದ್ರಾಬಾದ ಕರ್ನಾಟಕದಂತಹ ಅಸಾಹಿತ್ಯಿಕದ ವಾತಾವರಣದಲ್ಲಿ ನೀವು ಕವಿಯಾಗಿ ಅಂಕುರಿಸಿದ್ದು, ಒಂದು ಪವಾಡ"[೪] ಎಂಮು ಹೇಳಿರುವುದು ಗಮನಾರ್ಹ.

---
ಅಡಿಟಿಪ್ಪಣಿ

೪ ಯುಗವಾಣಿ ೧೯೯೮ ಗಣ್ಯರ ಅಭಿಪ್ರಾಯ ಪುಟ–II ಡಾ।। ಎಮ್.ಎಮ್. ಕಲ್ಬುರ್ಗಿ

## ೨. ಐವತ್ತೆಂಟರಲ್ಲಿ ಅನುತ್ತರನ ಪೌರುಷ:

ಇದು ಬಂಡೆಪ್ಪ ಖೂಬಾರವರ ಎರಡನೇ ಕವನ ಸಂಕಲನವಾಗಿದ್ದು, ೧೯೯೫ ರಲ್ಲಿ ಓದುಗರ ಕೈಸೇರಿದೆ. ಈ ಕೃತಿಯಲ್ಲಿ ಅವರ ಬಾಲ್ಯ ಜೀವನದಿಂದಲೂ ಬರೆದಿರುವ ಕವನದಲ್ಲಿಯ ಕೆಲ ಕವನಗಳು ಅವರ ೫೮ನೇ ವಯಸ್ಸಿನಲ್ಲಿ ಪ್ರಕಟಿಸಲಾಗಿದ್ದು, ಕವಿಯ ೫೮ ವಯಸ್ಸಿನವರೆಗಿನ ಅನುಭವಗಳನ್ನು ಕಾವ್ಯದ ಮೂಲಕ ಹೊರಹೊಮ್ಮಿಸಲಾಗಿದೆ. ಅದಕ್ಕಾಗಿಯೇ ಈ ಕವನ ಸಂಕಲನದ ಶೀರ್ಷಿಕೆಯನ್ನು 'ಐವತ್ತೆಂಟರಲ್ಲಿ ಅನುತ್ತರನ ಪೌರುಷ' ಎಂದು ಇಟ್ಟಿರುವುದು ತಿಳಿದು ಬರುತ್ತದೆ. ಹೀಗಾಗಿ ಕವಿಯು ತಮ್ಮ ೫೮ ವರ್ಷಗಳ ಬದುಕಿನಲ್ಲಿ ಕಂಡುಂಡ ಏರಿಳಿತಗಳನ್ನು ಇಲ್ಲಿ ಸಿಂಹಾವಲೋಕನ ಕ್ರಮದಿಂದ ಗಮನಿಸಿದ್ದು ಕಾಣಸಿಗುತ್ತದೆ. ಅಂತೆಯೇ ಇದು ಐವತ್ತೆಂಟರಲ್ಲಿ ಅನುತ್ತರನ ಪೌರುಷವೆನ್ನುವ ಹೆಸರನ್ನಿಟ್ಟುಕೊಂಡು ಅನ್ವರ್ಥಕತೆಯನ್ನು ಪಡೆದುಕೊಂಡಿದೆ.

ಬೇರೆ ಬೇರೆ ವಿಷಯಗಳ ವಸ್ತುವಿರುವ ಇಲ್ಲಿಯ ಕವನಗಳು ವೈವಿಧ್ಯಮಯವಾಗಿದ್ದು, ಹಲವು ರೀತಿಯಲ್ಲಿ ಏಕತೆಯನ್ನು ಎತ್ತಿ ತೋರಿಸುತ್ತಿವೆ. ಸರಳ ಭಾಷೆಯಲ್ಲಿ ಭಾವನೆಗಳನ್ನು ಸರಳವಾಗಿ ನಿರೂಪಿಸುವ ಇಲ್ಲಿಯ ಶೈಲಿ ಜನರಿಗೆ ಗಹನವಾದ ವಿಸ್ಮಯವನ್ನು ತಿಳಿಸುವಲ್ಲಿಯೂ ವಿವೇಚಿಸಿ ಹೇಳುವಲ್ಲಿ ಸಫಲವಾಗಿವೆ. ಸಮಾಜದಲ್ಲಿರುವ ಬಡತನದ ಸಮಸ್ಯೆ, ಜೀವನದ ಜಂಜಾಟ, ಕೌಟುಂಬಿಕ ಬದುಕು, ಮಾನವೀಯತೆ, ಮೊದಲಾದ ಅಂಶಗಳು ಇಲ್ಲಿ ಚರ್ಚಿತ ವಿಷಯಗಳಾಗಿದ್ದು, ಓದುಗರನ್ನು ಆ ನೆಲೆಗೆ ಕೊಂಡೊಯ್ಯುತ್ತಿರುವದು ಈ ಕೃತಿಯ ವೈಶಿಷ್ಟ್ಯವೆನ್ನಬಹುದು.

ಬಂಡೆಪ್ಪ ಅವರು ಚಿಂತನಶೀಲ ಹಾಗೂ ಸಂವೇದನಾಶೀಲ ಕವಿ. ಈ ಸಂಕಲನದ ಕವನಗಳಲ್ಲಿ ಹಲವು ವಿಷಯ ಹಾಗೂ ಸಂದರ್ಭಗಳನ್ನು ಬಹು ಸೂಕ್ಷ್ಮವಾಗಿ ಗಮನಿಸಿರುವುದನ್ನು ಕಾಣಬಹುದು. ಕಲ್ಪನೆಗಿಂತ ಸ್ವಾನುಭವವೇ ಇಲ್ಲಿಯ ಕವಿತೆಗಳ ವಸ್ತುವಾಗಿದ್ದು, ಇದಕ್ಕೆ ಬೇಕಾದಷ್ಟು ನಿದರ್ಶನಗಳಿವೆ. ಶ್ರೀ ಖೂಬಾ ಅವರ ಹಡೆದ ತಾಯಿ ಹಾಗೂ ಪಡೆದ ತಾಯಿ ಇರ್ವರ ವಾತ್ಸಲ್ಯ ಪಡೆದವರು. ಹೆಂಡತಿಯೊಂದಿಗೆ ಸುಖ ದಾಂಪತ್ಯ ಜೀವನ ಸಾಗಿಸಿದವರು ಹಾಗೂ ಅಕ್ಕ ತಂಗಿಯವರ ಪ್ರೀತಿ, ಪ್ರೋತ್ಸಾಹದಲ್ಲಿ ನಡೆದವರು, ಈ ಹಿನ್ನೆಲೆಯಲ್ಲಿ ಒಬ್ಬ ಸಾಹಿತಿಯಾಗಿ ಹೊರಹೊಮ್ಮಿದ್ದು, ಅವರ ಜೀವನದ ರೀತಿಯಾಗಿರುವುದನ್ನು, ಆ ಸಂದರ್ಭದ ಭಾವನೆಗಳ ವಿವರಣೆಯುಳ್ಳ ಪಿಂಕಿ, ಪ್ರೇಮಪಥ, ಕವಿ, ನಾನು ನೀನು, ಯಾಚನೆ, ಜ್ಞಾನಭಾನು ಮೊದಲಾದ ಕವನಗಳನ್ನು ಪರಿಶೀಲಿಸಿ ಕಾಣಬಹುದು.

ಇಲ್ಲಿಯ ಹಲವು ಕವಿತೆಗಳು ಜನಪರ ಕಾಳಜಿಗಳುಳ್ಳವಾಗಿದ್ದು, ಭಾಷೆಯ ಸರಳತೆ, ಅಭಿವ್ಯಕ್ತಿ ಸೌಂದರ್ಯ ಹಾಗೂ ಸಾಮಾಜಿಕ ಕಾಳಜಿಗಳಿಂದ ಕೂಡಿದ್ದು ಜನಮನವನ್ನು ರಂಜಿಸುತ್ತಿವೆ. ಇವು ಮೇಲ್ನೋಟಕ್ಕೆ ವ್ಯಕ್ತಿನೆಲೆಯಲ್ಲಿ ಕಾಣಿಸಿದರೂ ಒಳನೋಟದಲ್ಲಿ ಸಾರ್ವತ್ರಿಕ ನೆಲೆಯಿಂದ ಪರಿಣಾಮ ಬೀರುತ್ತವೆ. ಕಾವ್ಯ ಕಲೆಯ ದೃಷ್ಟಿಯಿಂದ ಹಲವು

ಇತಿಮಿತಿಗಳಿಂದ ಇಲ್ಲಿ ಗುರುತಿಸಬಹುದಾದರೂ ಬೀದರ ಜಿಲ್ಲೆಯ ಭಾಷೆ, ಭಾವನೆಗಳ ಅಭಿವ್ಯಕ್ತಿ ಕ್ರಮದಿಂದ ಗಮನಾರ್ಹವಾಗುತ್ತವೆ. ಹಲವು ದೃಷ್ಟಿಯಲ್ಲಿ ತಮ್ಮದೇ ಆದ ಹೊಸತನವನ್ನು ಪ್ರದರ್ಶಿಸುತ್ತವೆ.

ಪ್ರತಿಭೆ ಪಾಂಡಿತ್ಯಗಳ ಸಮನ್ವಯತೆಯಿಂದ ಕಾವ್ಯದ ತೇಜಸ್ಸು ಎದ್ದು ಕಾಣುತ್ತದೆ. ಮುಕ್ತವಾದ ಭಾವ ಲಯದಿಂದ ಓದುಗರಲ್ಲಿ ಹೊಸತನ ಮೂಡಿಸುತ್ತವೆ. ಇದಕ್ಕಾಗಿಯೇ ಕನ್ನಡ ವಾಙ್ಮಯದಲ್ಲಿ ಉಳಿಯುವ ಸಂಪತ್ತಾಗಿ ಈ ಕೃತಿ ಗಮನಾರ್ಹವಾಗುತ್ತದೆ.

**೩. ಪುರಸ್ಕಾರ**

೧೯೯೬ ರಲ್ಲಿ ಪ್ರಕಟಣೆಗೊಂಡಿರುವ 'ಪುರಸ್ಕಾರ' ಬಂಡೆಪ್ಪ ಖೂಬಾರ ಮೂರನೆಯ ಕೃತಿ. ಹನ್ನೊಂದು ಅನುವಾದಿತ ಕಥೆಗಳನ್ನೊಳಗೊಂಡ ಇದು ಖೂಬಾರವರ ಪ್ರಥಮ ಕಥಾ ಸಂಕಲನವೆನಿಸಿದೆ. ಪ್ರಸಿದ್ಧವಾಗಿರುವ ಹಿಂದೀ ಕಥಾ ಸಾಹಿತ್ಯದಲ್ಲಿ ಅತ್ಯಂತ ಮಹತ್ವ ಪಡೆದಿರುವ ಮತ್ತು ಸಾರ್ವಕಾಲಿಕ ಮೌಲ್ಯಗಳನ್ನು ಒಳಗೊಂಡಿರುವ ಕೆಲವು ಪ್ರತಿನಿಧಿ ಕಥೆಗಳನ್ನು ಎತ್ತಿಕೊಂಡು ಕನ್ನಡಕ್ಕೆ ಅನುವಾದಿಸಿಕೊಟ್ಟಿರುವ ಈ ಕಥಾ ಸಂಕಲನವನ್ನು ಪ್ರಕಟಿಸಿದ್ದಾರೆ. "ಜಯಶಂಕರ ಪ್ರಸಾದ, ಪ್ರೇಮಚಂದ, ಶಿವರಾನಿ ಪ್ರೇಮಚಂದ, ಯಶಪಾಲ, ಸಿಯಾರಾಮಶರಣಗುಪ್ತ, ಸುದರ್ಶನ, ಸುಭದ್ರಾಕುಮಾರಿ ಚೌಹಾನ, ಜೈನೇಂದ್ರಕುಮಾರ, ಉಷಾ ಪ್ರಿಯಂವಧಾ, ಮೋಹನಲಾಲ ಮಹತೋ ಮತ್ತು ಹರಿಶಂಕರ ಪರಸಾಯಿ ಯವರ 'ಪುರಸ್ಕಾರ' 'ಗೋಧಿಯ ಬೆಲೆ' 'ಕ್ಷಮೆ' 'ಪರದೇ' 'ಚಿಕ್ಕಮ್ಮ' 'ಸನ್ಯಾಸಿ' 'ಗೌರಿ' 'ಇನಾಮು' 'ಹಿನ್ನಡೆ' 'ಅಂತಿಮ ಭೇಟಿ' 'ತ್ರಿಶಂಕುವಿನ ಮನೆ' ಎಂದು ಪ್ರಸಿದ್ದ ಹಿಂದಿ ಕಥೆಗಳನ್ನು ಕನ್ನಡದಲ್ಲಿ ಅನುವಾದಿಸಿದ್ದಾರೆ."*

ಕೇಂದ್ರ ಬಿಂದು ಒಂದನ್ನು ಅವಲಂಬಿಸಿ ಮುಂದೆ ಸಾಗುತ್ತಿರುವ ಇಲ್ಲಿಯ ಕಥೆಗಳು ಘಟನೆ ಮತ್ತು ಚರಿತ್ರೆಯ ದೃಷ್ಟಿಯಿಂದ ಸುಂದರವಾಗಿದೆ. ರೋಚಕ ಕಥಾವಸ್ತುವನ್ನು ಇಟ್ಟುಕೊಂಡು ಚರಿತ ಪ್ರಧಾನವಾದ ಇಲ್ಲಿಯ ಕಥೆಗಳು ಜೀವಂತವಾಗಿದೆ ಪಾತ್ರ, ಸಂಭಾಷಣೆ ಮತ್ತು ಶೈಲಿಯನ್ನು ವಾತಾವರಣಕ್ಕೆ ಹೊಂದಿಸಿ, ಕಥೆಯನ್ನು ಮನೋಜ್ಞವಾಗಿರುವಂತೆ ನಿರೂಪಿಸಿದ್ದು, ಈ ಕಥೆಗಳ ವೈಶಿಷ್ಟ್ಯವೆನ್ನಬಹುದು. ಉದ್ದೇಶ, ಕಥಾವಸ್ತು, ಚರಿತ್ರಚಿತ್ರಣ, ಸಂವಾದ, ಪರಿಸರ, ವರ್ಣನೆ ಕಥೆಯ ಆರಂಭ ಮತ್ತು ಅನ್ಯ ಹಾಗೂ ಕಥೆಯ ತಲೆಬರಹ ಮೊದಲಾದ ಉತ್ತಮ ಕಥೆಯ ಅಂಶಗಳು ಇಲ್ಲಿ ಗುರುತಿಸ್ಪಲಡುವಂತೆ ಕಥೆಗಾರರು ಲಕ್ಷವಹಿಸಿದ್ದು ಎಲ್ಲೆಲ್ಲೂ ಎದ್ದು ಕಾಣುತ್ತದೆ. ಓದಲು ಪ್ರಾರಂಭಿಸಿದ ಪ್ರತಿಯೊಂದು ಕಥೆಯು ಒಮ್ಮೆಗೆ ಓದಿ ಮುಗಿಸುವಷ್ಟು ಪ್ರಭಾವಶಾಲಿಯಾಗಿದ್ದು, ಈ ಕಾರ್ಯ ಸಾಧಿಸಲು

**ಅಡಿಟಿಪ್ಪಣೀ:**

* ಪುರಸ್ಕಾರ –೧೯೯೬ ಪ್ರಸ್ತಾವನೆಯಲ್ಲಿ

ಅನುವಾದಕರು ಮೂಲ ಕಥೆಯ ಅತ್ಯುತ್ತಮವಾದ ರಚನಾ ಕೌಶಲ್ಯವನ್ನು ಉಳಿಸಿಕೊಂಡಿರುವುದು ಪ್ರತಿ ಕಥೆಯಲ್ಲೂ ಗಮನಕ್ಕೆ ಬರುತ್ತದೆ. ಇಲ್ಲಿಯ ಕಥೆಗಳ ಒಟ್ಟು ಸ್ವರೂಪವು ಆಕರ್ಷಕವಾಗಿರುವುದಲ್ಲದೇ ಓದುಗರ ಉತ್ಸುಕತೆಯನ್ನು ಹೆಚ್ಚಿಸುವಂತಹ ವ್ಯಂಜಕಗಳಿಂದ ತುಂಬಿಕೊಂಡಿರುವುದನ್ನು ಎಲ್ಲೆಲ್ಲೂ ಕಾಣಬಹುದು.

ಇಲ್ಲಿ ಪ್ರಕಟಣೆಗೊಳಿಸಲಾಗಿರುವ ಹನ್ನೊಂದು ಕಥೆಗಳನ್ನು ಐತಿಹಾಸಿಕ ಪದ್ಧತಿ, ಆತ್ಮಕಥನ ಪದ್ಧತಿ, ಪತ್ರ ಪದ್ಧತಿ ಮತ್ತು ಸಂವಾದ ಪದ್ಧತಿಯ ಶೈಲಿಗಳಲ್ಲಿ ಗುರುತಿಸಬಹುದಾದರೂ ಕಥಾಲೇಖನ ಪ್ರಯತ್ನ ಸಫಲಗೊಂಡಿರುವುದು ಸುಸ್ಪಷ್ಟ. ಈ ಕಥೆಗಳನ್ನು ಪ್ರಧಾನತೆಯ ದೃಷ್ಟಿಯಿಂದ.

೧. ಘಟನಾಪ್ರದಾನ ಕಥೆಗಳು
೨. ಚರಿತ್ರೆ ಪ್ರಧಾನ ಕಥೆಗಳು
೩. ಭಾವಪ್ರಧಾನ ಕಥೆಗಳು
೪. ವರ್ಣನಾಪ್ರಧಾನ ಕಥೆಗಳು

ಎಂದು ನಾಲ್ಕು ಪ್ರಕಾರಗಳಲ್ಲಿ ವಿಂಗಡಿಸಬಹುದಾಗಿದೆ.

"ಮೂಲ ಕಥೆಗಳ ಆದರ್ಶನ್ಮುಖತೆ, ಶಿಲ್ಪ ಹಾಗೂ ಭಾಷಾ ಪ್ರಯೋಗ ಮತ್ತು ಸಾಹಿತ್ಯಿಕ ದೃಷ್ಟಯಿಂದ ಗಮನದಲ್ಲಿರಿಸಿಕೊಂಡು ಅವುಗಳನ್ನು ಅನುವಾದಿಸಲಾಗಿದ್ದು, ಈ ಕಾರ್ಯವನ್ನು ಹಲವು ವಿದ್ವಾಂಸರು ಪ್ರೋತ್ಸಾಹಿಸಿದ್ದಾರೆ"[೬]

## ೪. ಬಿಂಬ ಪ್ರತಿಬಿಂಬ :

ಇದು ಬಂಡೆಪ್ಪ ಖೂಬಾರವರ ನಾಲ್ಕನೆಯ ಕೃತಿಯಾಗಿದ್ದು, ೧೯೯೭ ರಲ್ಲಿ ಪ್ರಕಟಣೆಗೊಂಡಿದೆ. ಶ್ರೀಯುತರ ಎರಡನೆಯ ಕಥಾಸಂಕಲನವಾಗಿರುವ ಇದರಲ್ಲಿ ಹಿಂದೀ ಭಾಷೆಯಿಂದ ಅನುವಾದಗೊಂಡ ನಾಲ್ಕು ಕಥೆಗಳು ಹಾಗೂ ಕೆಲವು ಹಿಂದೀ ಲೇಖಕರ ಪ್ರಭಾವಕ್ಕೊಳಗಾಗಿ ಸ್ವತಃ ರಚಿಸಿದ ಖೂಬಾರವರ ನಾಲ್ಕು ಕಥೆಗಳೂ ಇವೆ. ಈ ಆಧಾರದಲ್ಲಿಯೇ ಕಥೆಗಾರರು ಈ ಕೃತಿಗೆ 'ಬಿಂಬ ಪ್ರತಿಬಿಂಬ' ಎಂಬ ಹೆಸರನ್ನಿರಿಸಿದ್ದು ಅದು ಅನ್ವರ್ಥಕವಾಗಿದೆ. ತರಂಗ ವಾರಪತ್ರಿಕೆಗೆ ಪ್ರಸಿದ್ಧವಾದ ಅನ್ಯಭಾಷೆಯ ಕಥೆಗಳನ್ನು ಅನುವಾದ ಮಾಡಿಕೊಡುತ್ತಿದ್ದ ಖೂಬಾರವರು ವಾರಕ್ಕೊಂದು ತಿಂಗಳಿಗೊಂದು ಮೌಲಿಕ ಕಥೆಗಳನ್ನು ಹುಡುಕಿ ಸೋತಾಗ ಅನಿವಾರ್ಯವಾಗಿ ತಾವೇ ಕಥೆಗಳನ್ನು ರಚಿಸಲು ಪ್ರಾರಂಭಿಸಿದರು. ಅವುಗಳನ್ನು ಪತ್ರಿಕೆಗೆ ಕಳುಹಿಸಿದಾಗ ಅವು ಅತ್ಯುತ್ತಮ ಕಥೆಗಳಾಗಿ ಹೊರಹೊಮ್ಮಿದವು. ಓದುಗರು ಪತ್ರದ ಮೂಲಕ ಇವರ ಕಥೆಗಳನ್ನು ಮೆಚ್ಚಿ ಬರೆದದ್ದು ಓದಿ, ಹಾಗೆಯೇ ಕಥೆಗಳನ್ನು ಬರೆಯುತ್ತಾ ಇಂದು ಈ ಜಿಲ್ಲೆಯ ಅತ್ಯುತ್ತಮ ಕಥೆಗಾರರಲ್ಲಿ ಒಬ್ಬರೆನಿಸಿದ್ದಾರೆ. 'ಬಿಂಬ ಪ್ರತಿಬಿಂಬ'ದ ಕಥೆಗಳು ವಿವರಗಳನ್ನು ಕೆಳಗಿನಂತೆ ವಿವರಿಸಬಹುದು.

**ಅಡಿಟಿಪ್ಪಣಿ:**

೬ ಪುರಸ್ಕಾರ –೧೯೯೬ ಪ್ರಸ್ತಾವನೆಯಲ್ಲಿ .

ಹಿಂದೀಯಲ್ಲಿ ಅತ್ಯುತ್ತಮವೆನಿಸಿದ ಕೆಲವು ಏಕಾಂಕಿಗಳನ್ನು ಕಥಾ ರೂಪಕ್ಕೆ ತಂದಿದ್ದ [೭]"ಪಂಡಿತ ಗೋವಿಂದ ವಲ್ಲಭಪಂತರ 'ಕಪಡೆ ಕಾ ಆದಮಿ' ಯನ್ನು 'ನಂದಿದ ಜ್ಯೋತಿ' 'ಶ್ರೀ ವಿನೋದ ರಸ್ತೋಗಿಯವರ 'ಫೈಸಲಾ' ಯನ್ನು 'ತೀರ್ಮಾನ' ಹಾಗೂ 'ಬಹುಕೀ ಬಿದಾಯಿ' ಯನ್ನು 'ಮಗಳು ಸೊಸೆ' ಮತ್ತು ಯಶಃಪಾಲರ 'ದುಃಖ' ಎಂಬ ಏಕಾಂಕಿಯನ್ನು ದುಃಖ ಎಂದು ಕನ್ನಡಕ್ಕೆ ತಂದಿದ್ದಾರೆ. ಬಂಡೆಪ್ಪರು ಸ್ವತಃ ಬರೆದ 'ಧೂಳಪ್ಪನ ಧರ್ಮಸಂಕಟ' 'ಸಾವಿನಿಂದ ಬಿಡುಗಡೆ' ವಿಚಿತ್ರ ಸತ್ಯ ಮತ್ತು ಅಂತಿಮ ನಿರ್ಧಾರ"[೭] ನಾಲ್ಕು ಕಥೆಗಳು ಬಿಂಬದ ರೂಪದಲ್ಲಿದ್ದರೆ, ಖೂಬಾರ ನಾಲ್ಕು ಕಥೆಗಳು ಪ್ರತಿಬಿಂಬದ ಸ್ವರೂಪದಲ್ಲಿವೆ.

ಓದುಗರ ಕುತೂಹಲ ಕೆರಳಿಸುವಂತಿರುವ ಇಲ್ಲಿಯ ಕಥೆಗಳು ಲೇಖಕರ ಮನಸ್ಸಿನ ಮೇಲೆ ತನ್ನದೆ ಆದ ಪ್ರಭಾವವನ್ನು ಬೀರಿದಂತಹ ಸತ್ಯ ಘಟನೆಗಳ ಆಧಾರದ ಮೇಲೆ ರಚಿತವಾಗಿವೆ. ಒಟ್ಟಾರೆಯಾಗಿ ಇಲ್ಲಿಯ ಕಥೆಗಳು ತಂತ್ರದ ದೃಷ್ಟಿಯಿಂದ ಹಾಗೂ ವಿಷಯ ವಿವರಣೆಯ ದೃಷ್ಟಿಯಿಂದ ಹೊಸತನವನ್ನು ತೋರುತ್ತವೆ. [೮]"ಕಥಾವಸ್ತುವಿನ ವಿನೂತನತೆ, ಶೈಲಿಯ ಮನೋಜ್ಞತೆ ಸಂವಿಧಾನದ ಪ್ರಬುದ್ಧತೆ ಹಾಗೂ ಕಥಾ ರಚನೆಯ ಸಮಗ್ರಶಿಲ್ಪಿ ಇವುಗಳಿಂದ "ಬಿಂಬ ಪ್ರತಿಬಿಂಬ" ಸಹೃದಯರ ಹೃದಯ ವಿಶ್ರಾಂತವಾಗುತ್ತದೆ"[೮] ಎಂದು ವಿದ್ವಾಂಸರು ಹೇಳುವಲ್ಲಿ ಸತ್ಯವಿದೆ.

೫. ಯುಗವಾಣಿಃ

ಈ ಕೃತಿಯು ಬಿ.ಎಸ್. ಖೂಬಾರವರ ಐದನೆಯ ಕೃತಿಯಾಗಿದ್ದು, ೧೯೯೮ ಪ್ರಕಟನೆಗೊಂಡಿದೆ. ಪ್ರತಿಪಾದದಲ್ಲಿ ನಾಲ್ಕು ಗಣಗಳಿಂದ ಕೂಡಿದ ಲಲಿತರಗಳೆಯ ಮಾದರಿಯಲ್ಲಿ ಅನುಸರಿಸಿಕೊಂಡಿರುವ ೬೧೦ ಚೌಪದಿಗಳು ಇದರಲ್ಲಿವೆ. ಇದೊಂದು ಪ್ರಬಂಧ ಕಾವ್ಯವಾಗಿದ್ದು ಪ್ರತಿ ಚೌಪದಿಯು "ಹುಲಿಯಸಿದ್ದೇಶ್ವರ" ಅಂಕಿತ ನಾಮದಿಂದ ಕೊನೆಗೊಳ್ಳುತ್ತದೆ. ನವ್ಯಕಾವ್ಯದ ಮಾರ್ಗದ ಇಂದಿನ ಹೊಸ ವಾತಾವರಣದಲ್ಲಿ ಅದನ್ನು ಅನುಸರಿಸದೇ ಕವಿಯ ಸನಾತನ ಸರಳ ಮಾರ್ಗವನ್ನು ಅನುಸರಿಸಿದ್ದು, ಹೆಚ್ಚು ಗಮನ ಸೆಳೆಯುತ್ತದೆ. ಕವಿಯ ನಿರೀಕ್ಷೆ ಇಲ್ಲಿ ಸ್ಪಷ್ಟವಾಗಿದ್ದು ಅದು ಜನಸಾಮಾನ್ಯರಿಗೆ ತಿಳಿಯಬೇಕೆಂಬ ಉದ್ದೇಶ ಹೊಂದಿದೆ. ಕಾವ್ಯವನ್ನು ಓದುತ್ತ ಹೋದಂತೆಲ್ಲ ಜಾನಪದ ಕಾವ್ಯಕ್ಕೆ ಇದರ ಲಯ ಹತ್ತಿರವಾಗುವುದು ಇಲ್ಲಿಯ ವಿಶೇಷತೆಯಾಗಿದ್ದು, ಆ ಮೂಲಕ ಈ ಕೃತಿಯು ಮತ್ತೆ ಮತ್ತೆ ಓದಲು ತೊಡಗಿಸಿಕೊಳ್ಳುತ್ತದೆ ಎನ್ನಬಹುದು.

---

ಅಡಿಟಿಪ್ಪಣಿಃ

೭ ಬಿಂಬ ಪ್ರತಿಬಿಂಬ ಶ್ರೀ ೧೯೯೭ ಮುನ್ನುಡಿ ಬಿ.ಎಸ್.ಖೂಬಾ

೮ ಯುಗವಾಣಿ ೧೯೯೮ ಪುಟ ೩೩ ಗಣ್ಯರ ಅಭಿಪ್ರಾಯ ಡಾ।। ಸಾ.ಶಿ. ಮರುಳಯ್ಯ

ಕವಿಯು ತಾನು ಬದುಕಿರುವ ಕಾಲವನ್ನು ತಮ್ಮ ಪಾಲಿನ ಒಂದು ಯುಗವೆಂದು ಭಾವಿಸಿ ಈ ಯುಗದಲ್ಲಿ ಅವರು ಕಂಡುದುದನ್ನು ಅನುಭವಿಸಿದುದನ್ನು ಈ ಕಾವ್ಯ ಕೃತಿಯಲ್ಲಿ ಅಭಿವ್ಯಕ್ತಪಡಿಸಿದ್ದಾರೆ. ಹಾಗೂ ಒಂದು ಶತಮಾನ ಮುಕ್ತಾಯವಾಗುತ್ತ ಇನ್ನೊಂದು ಶತಮಾನದ ಉದಯವಾಗುತ್ತಿರುವುದರಿಂದಲೂ ಈ ಸಂಧಿಯ ಕಾಲದಲ್ಲಿ, ಕಾಲ ಹೊಳೆಸುವ ವಿಚಾರಗಳನ್ನು ಕಾವ್ಯ ರೂಪದಲ್ಲಿ ವಿವರಿಸಿದ್ದು, ನಮಗೆ ಸ್ಪಷ್ಟವಾಗಿ ಗೋಚರಿಸುತ್ತದೆ. ಅದಕ್ಕಾಗಿಯೇ 'ಯುಗವಾಣಿ' ಎಂಬ ಶೀರ್ಷಿಕೆ ಇಲ್ಲಿ ಮಹತ್ವ ಪಡೆಯುತ್ತದೆ.

ಇತ್ತೀಚಿನ ಐವತ್ತು ವರ್ಷಗಳಲ್ಲಿ ಮಾನವ ಸಾಧನೆ ಹಾಗೂ ಕವಿ ಬದುಕಿನಲ್ಲಿ ಕಂಡುಂಡ ನೋವು ನಲಿವುಗಳ ವಿವರಣೆ ಇಲ್ಲಿದ್ದು, ಭಾರತದ ಸ್ವಾತಂತ್ರ್ಯ ಪಡೆದದ್ದು. ಹಾಗೂ ಭಾರತ ಸ್ವಾತಂತ್ರ್ಯ ಪ್ರಾಪ್ತಿಯ ಸುವರ್ಣ ಮಹೋತ್ಸವ ಆಚರಣೆ, ಸಂಸತ್ತಿನ ಅಧಿವೇಶನ, ಮಾನವನ ದಾನವತ್ವ, ದುಡ್ಡಿಗಾಗಿ ಮಾನವನು ಮಾಡುತ್ತಿರುವ ಹೀನಕಾರ್ಯ, ಬಡವರ ಸ್ಥಿತಿಗತಿ ಇಂದಿನ ಜನರಲ್ಲಿ ದೇವರ ಬಗ್ಗೆ ಇರುವ ನಂಬಿಕೆ–ಅಪನಂಬಿಕೆ ಮತ್ತು ಕವಿಯ ಜೀವನದಲ್ಲಿ ಸಂಭವಿಸಿದ ಕೆಲವು ಮಹತ್ವದ ಘಟನೆಗಳು, ರಾಜಕೀಯ ನೈಜ ಚಿತ್ರಣ, ಸಾಹಿತ್ಯ ಮತ್ತು ಕಾವ್ಯದ ಮಹತ್ವ, ಇಪ್ಪತೊಂದನೆ ಶತಮಾನದ ಮುನ್ಸೂಚನೆಗಳ ಸಂಕೇತಗಳು ಮುಂತಾದ ವೈವಿಧ್ಯಮಯ ವಿಷಯಗಳು ಆತ್ಮ ನಿವೇದನೆಯ ರೂಪದಲ್ಲಿ ಅಭಿವ್ಯಕ್ತವಾಗಿದೆ. 'ಹುಲಿಯಸಿದ್ದೇಶ್ವರ' ಎಂಬ ಅಂಕಿತ ನಾಮವಿಟ್ಟುಕೊಂಡ ಈ ಕೃತಿಯ ರಚನೆಯ ಮೇಲೆ ವಚನಕಾರರ ಪ್ರಭಾವವಾಗಿರುವುದನ್ನು ಸ್ಪಷ್ಟವಾಗಿ ಗುರುತಿಸಬಹುದು. ಆದರೆ ಹುಲಿಯಸಿದ್ದೇಶ್ವರ ಬಳಕೆ ಏಕೆ? ಹುಲಿಯಸಿದ್ದೇಶ್ವರ ಯಾರಿರಬಹುದು? ಸಿದ್ದರ ಅಣಿಗುಡ್ಡದಲ್ಲಿ ಅವನು ಯಾವಾಗ ಮತ್ತು ಹೇಗೆ ಬಂದು ಕುಳಿತಿರಬಹುದು? ಎಂಬುದು ಇಲ್ಲಿಯ ಪ್ರಶ್ನೆಯಾಬಹುದಲ್ಲವೆ? ಈ ಸಂಗತಿಯ ಬಗ್ಗೆ ಲೇಖಕರಿಗೂ ಖಚಿತವಾದ ಮಾಹಿತಿ ಲಭಿಸಿಲ್ಲ. ಗಡವಂತಿಯ ಕವಿಯ ಹೊಲದಲ್ಲಿ ಹುಲಿಯಸಿದ್ದೇಶ್ವರ ಸಣ್ಣ ದೇವಾಲಯವಿದ್ದು, ಆ ದೇವಾಲಯದ ಒಳಗಡೆ ಇರುವ ಮೂರ್ತಿಯು ಹುಲಿಯ ಮುಖಕ್ಕೆ ಹೋಲುತ್ತದೆ.

"ಇದರಿಂದ ನನ್ನ ಮೇಲೆ ಯಾವುದೇ ಪರಿಣಾಮವಾಗದಿದ್ದರೂ ಅಂತರಿಕವಾದ ಹುಲಿಯ ಸಿದ್ಧನಿಂದ ನನಗೆ ಯಾವುದೋ ಒಂದು ಪ್ರಕಾರದ ಪ್ರೇರಣೆ ದೊರೆತಂತೆ ಅನಿಸುತ್ತಿದೆ ಎಂದು ಕವಿ ಹೇಳುತ್ತಾನೆ"[೯] ಹೀಗಾಗಿ ಆ ಹುಲಿಯಸಿದ್ದೇಶ್ವರ ಅಂಕಿತವನ್ನಿಟ್ಟುಕೊಂಡು ಕಾವ್ಯ ಬರೆಯಲಾಗಿದೆ. ಇದನ್ನು ಕೆಲವರು ಮೂಢ ನಂಬಿಕೆ ಅಂತಲೂ ಹೇಳಬಹುದು. ಹೇಗೆ ಜನನ ಮರಣಗಳೆರಡೂ ರಹಸ್ಯವಾಗಿಯೇ ಉಳಿದಿವೆ ಹಾಗೇ ಈ ರಹಸ್ಯದ ಕುರಿತು ಅರಿಯಲು ತೊಡಗಿದ ಮನುಷ್ಯನು ದ್ವಂದ್ವಲ್ಲಿ ಬಳಲುತ್ತಾನೆ. ಎನಿಸಿದರೂ ಸಹ ಇದರ ಬಗ್ಗೆ ಮಹಾನ ದಾರ್ಶನಿಕರು ಒಮ್ಮತಕ್ಕೆ ಬಂದಿಲ್ಲ ಎಂದು ಸಮಾಧಾನಗೊಳ್ಳಬಹುದು. ಆದರೂ ಲೇಖಕರು

---

**ಅಡಿಟಿಪ್ಪಣಿ:**

೯ ಯುಗವಾಣಿ ೧೯೯೮ ಪುಟ-೪ ಬಿ.ಎಸ್.ಖೂಬಾ (ಪ್ರಾಕ್ಕಥನ)

ಇವೆಲ್ಲಾ ನಂಬದೇ ಇರುವುದಕ್ಕಿಂತ ನಂಬಿ ಬಾಳುವುದು ಸೂಕ್ತವಾಗಿದೆ ಎನ್ನುತ್ತಾ ನಂಬಿಗೆಯಲ್ಲಿ ಈ ಪ್ರಬಂಧ ಕಾವ್ಯವನ್ನು ರಚಿಸಿದ್ದಾರೆ. ಏಕೆಂದರೆ ಪ್ರತಿಯೊಬ್ಬ ಜೀವನದಲ್ಲಿ ಕೆಲವು ಘಟನೆಗಳು ನಿರೀಕ್ಷೆಯ ಸೀಮೆ ದಾಟಿ ನಿಲ್ಲುತ್ತವೆ. ಹೀಗೆ ನಿಲ್ಲಬೇಕಾದರೆ ಆ ಘಟನೆ ಹಿನ್ನೆಲೆ ಯಾವುದೋ ಒಂದು ಇದ್ದೇ ಇರುತ್ತದೆ. ಅದುವೇ ಅಮೂರ್ತವಾದ ಚೇತನ ಶಕ್ತಿಯಾಗಿರಬಹುದು. ಅದನ್ನೇ ನಾವು ಪರಮಾತ್ಮ, ಸೃಷ್ಟಿಕರ್ತ ಹೀಗೆ ಹತ್ತು ಹಲವು ಹೆಸರುಗಳಿಂದ ಕರೆಯುವ ವಾಡಿಕೆ ಹಾಕಿಕೊಂಡಿದ್ದೇವೆ. ಸೃಷ್ಟಿ ವೈಚಿತ್ರಗಳನ್ನು ದಿನಾಲು ಕಾಣುವ ನಮಗೆ ಈ ಜಗತ್ತು ಆನಂದಮಯವಾಗಲು ಅದರ ಅರಿವು ಮುಖ್ಯ ಈ ಅರಿವನ್ನು ಸಂಬೋಧಿಸಿ ಎಲ್ಲವನ್ನು ವಚನಕಾರರ ರೀತಿ ಅನನ್ಯವಾದುದು. ಅದರ ಪ್ರೇರಣೆ ಈ ಕಾವ್ಯ.

ಒಟ್ಟಿನಲ್ಲಿ ಬಂಡೆಪ್ಪ ಅವರು ಪ್ರಬಂಧ ಕಾವ್ಯದ ಆದಿಯಲ್ಲಿ 'ಸರಸ್ವತಿ' 'ಗಣಪತಿ' 'ಹುಲಿಯಸಿದ್ದೇಶ್ವರ' ನನ್ನು ನೆನೆಯುತ್ತಾ 'ಯುಗವಾಣಿ' ಕೃತಿಯನ್ನು ಹುಲಿಯಸಿದ್ಧೇಶ್ವರನೇ ಕೈಹಿಡಿದು ಬರೆಸಿದ್ದಾನೆ. ಎಂದು ಹೇಳುವ ಪರಿಯಲ್ಲಿ ದೈವಿ ಶಕ್ತಿಯ ಪ್ರಭಾವವನ್ನು ಹಾಗೂ ಸೃಷ್ಟಿಯ ವಾಸ್ತವಿಕತೆಗಳನ್ನು ಹಲವು ಶಬ್ಧಗಳಲ್ಲಿ ಹುದುಗಿರಿಸಿ ವಿವರಿಸಿರುವುದನ್ನು ಗುರುತಿಸಬಹುದು. ಅಲ್ಲದೆ ಕವಿಯು ಸಂಪೂರ್ಣವಾಗಿ ದೈವವನ್ನೇ ನಂಬಿದವರಾಗಿದುದ್ದನ್ನು ಈ ಪ್ರಬಂಧ ಸಾರುತ್ತದೆ.

"'ಯುಗವಾಣಿ' ಇದೊಂದು ಅದ್ಭುತ ಕೃತಿ ಹುಲಿಯಸಿದ್ದೇಶ್ವರನ ಹೆಸರಿನಿಂದ ಕೊನೆಯಾಗುವ ಚೌಪದಿಗಳಿಂದ ಯುಗದ ಹತ್ತು ಹಲವು ಮುಖಗಳನ್ನು ಕಾಣುವಂತೆ ಮಾಡುತ್ತವೆ. ಕವಿಯ ವೈಯಕ್ತಿಕ ವೃತ್ತಗಳನ್ನು ಬದಿಗಿರಿಸಿದರೆ ಉಳಿದೆಲ್ಲ ವಿವರಗಳಲ್ಲಿ ಸಮಷ್ಟಿಗೆ ಪ್ರಾತಿನಿಧಿಕವಾಗುತ್ತದೆ"[೧೦] ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

**೬. ಶತಕಾಂತ್ಯದ ವಚನ ಶತಕ:**

ಇದು ಇಪ್ಪತ್ತನೇಯ ಶತಮಾನದ ಕೊನೆಯಲ್ಲಿ ಬರೆದಿರುವ ಆಧುನಿಕ ವಚನಗಳ ಸಂಕಲನವಿದು. ಎರಡು ಸಾವಿರದ ಶತಮಾನಂತ್ಯ ಎಂಬುದನ್ನೆ ಶತಕಾಂತ್ಯ ಎಂದು ಕರೆದಿದ್ದಾರೆ. 'ನೂರು ವಚನ'ಗಳು ಇದರಲ್ಲಿರುವುದರಿಂದ 'ವಚನ ಷತಕ' ಎಂದು ಕರೆದಿರುವರು ಹೀಗಾಗಿ 'ಶತಕಾಂತ್ಯದ ವಚನ ಶತಕ' ಎಂಬುದು ಅನ್ವರ್ಥಕ ಶೀರ್ಷಿಕೆಯಾಗಿದೆ. ಇದು ೨೦೦೧ ರಲ್ಲಿ ಪ್ರಕಟಗೊಂಡಿದೆ.

'ವಚನ' ಎಂಬ ಪದವು ಹನ್ನೆರಡನೆಯ ಷಮಾನದಲ್ಲಿ ಆಗಿ ಹೋದ ಶಿವಶರಣರ ವಚನಗಳನ್ನು ನೆನಪಿಗೆ ತಂದರೂ ಇಲ್ಲಿ ಆಧುನಿಕ ವಿಷಯಗಳಿರುವುದು ಗಮನಾರ್ಹ ಅಂಶ. ಆಧುನಿಕ ಈ ರಚನೆಗಳು ಹಿಂದಿನ ವಚನ ರಚನಾ ಚೌಕಟ್ಟನ್ನು ಇಟ್ಟುಕೊಂಡಂತೆ ಕಾಣಿಸಿದರೂ, ತಾತ್ವಿಕತೆ, ಆಧ್ಯಾತ್ಮಿಕತೆ, ಅನುಭಾವಿಕತೆ ಹಾಗೂ ಭಾಷಿಕತೆಯಲ್ಲಿ ವ್ಯತ್ಯಾಸವನ್ನು ಹೊಂದಿದ್ದು

---

**ಅಡಿಟಿಪ್ಪಣಿ:**

೧೦ ಯುಗವಾಣಿ ೧೯೯೮ ಪುಟ– I ಗಣ್ಯರ ಅಭಿಪ್ರಾಯ (ಎಸ್.ಎಮ್.ಹಿರೇಮಠ)

ನವೀನವೆನಿಸುತ್ತವೆ. ಶರಣರಂತೆ ಆಧ್ಯಾತ್ಮಿಕ ತಾತ್ವಿಕ ನೆಲೆಗಳನ್ನೇ ವಚನಗಳಿಗೆ ಕೇಂದ್ರವಾಗಿರಿಸಿಕೊಳ್ಳದೆ, ಆಧುನಿಕರು ಸಾಮಾಜಿಕ ನೆಲೆಗಳಲ್ಲೇ ಮಾನವನ ಬದುಕಿನ ಚಿತ್ರಣವನ್ನು ನಿರೂಪಿಸಲು ಪ್ರಯತ್ನಿಸಿದರು. ಹೀಗಾಗಿ ಭಾಷೆ ಸಾಂಕೇತಿಕತೆ ಅಭಿವ್ಯಕ್ತಿಗಳಲ್ಲಿ ಭಿನ್ನತೆ ಕಾಣ ಸಿಗುತ್ತದೆ. ವಚನಗಳು ಚುಟುಕುಗಳಾಗಿಯೂ ರಚನೆಗೊಂಡವು. ಚಂದ ಬಂಧನ ವಸ್ತು, ಸೀಮಿತತೆಗಳಿಲ್ಲದೆ, ಚಿಕ್ಕ ಚಿಕ್ಕ ವ್ಯಾಖೆಗಳಲ್ಲಿ ಹೆಣೆದ ರೂಪವು ಇಲ್ಲಿ ಪ್ರಮುಖವಾಗಿದೆ.

ತಮ್ಮ ಸಮಕಾಲೀನ ಸಮಸ್ಯೆಗಳನ್ನು ಘಟನೆಗಳನ್ನು ಆಧುನಿಕರು ಇಂಥ ವಚನಗಳ ಮೂಲಕ ನಿವೇದಿಸಿದರು. ಇವು ಸಾಮಾಜಿಕ ಕಾಳಜಿಯಾಗಿ ವ್ಯಷ್ಟಿ ಸಮಷ್ಟಿಗಳ ಹಿತರಕ್ಷಣೆಗಾಗಿ ಜನ ಸಾಮಾನ್ಯರಲ್ಲಿ ಅರಿವನ್ನು ಮೂಡಿಸುವುದಕ್ಕಾಗಿ ರಚನೆಗೊಂಡಂತಿವೆ. ಈ ಉದ್ದೇಶದ ಹಿನ್ನೆಲೆಯಲ್ಲಿ ವಚನದ ಸ್ವರೂಪ ನಿರೂಪಿತವಾಯಿತು. ಸಂಕೀರ್ಣತೆ, ಗೇಯತೆ, ಗಾಂಭೀರ್ಯ ಕಣ್ಮರೆಯಾಗಿ ಶುಷ್ಕ ತತ್ವ ಮಾಯವಾಗಿ ಸಾಮಾಜಿಕ ಕಳಕಳಿಯು ಎದ್ದು ಕಾಣುವಂತೆ ರಚನೆಗೊಂಡಿರುವುದು ಈ ಕಾಲದ ಬದಲಾವಣೆ ಎನ್ನಬಹುದು. ವ್ಯಕ್ತಿ ಕೇಂದ್ರಿತ, ಸಮಾಜ ಕೇಂದ್ರಿತ, ಸಮಕಾಲೀನ ಬದುಕಿನ ದುರಂತ ಹಾಗೂ ಅದರ ಸಾರ್ಥಕ್ಯ ಇತ್ಯಾದಿಗಳ ಬಗೆಗೆ ನೇರ ಮಾತು ಆಧುನಿಕ ವಚನಗಳ ಒಡಲಲ್ಲಿ ಸೇರಿಕೊಂಡು ಅಭಿವ್ಯಕ್ತಗೊಂಡಿರುವುದು ಇಲ್ಲಿ ಗಮನೀಯ ಅಂಶವಾಗಿದೆ. ಈ ದೃಷ್ಟಿಯಲ್ಲಿ ಖೂಬಾರವರು ಆಧುನಿಕ ವಚನಕಾರರಲ್ಲಿ ಪ್ರಮುಖರಾಗುತ್ತಾರೆ.

ಈ ಕೃತಿಯಲ್ಲಿ [೧೧]"ಕಿರಿದಾದ ಪಾದಗಳಲ್ಲಿ ಹಿರಿಯರ್ಥ ತುಂಬಿಸಿ ನಿವೇದಿಸುವ ಗುಣವನ್ನು ಪ್ರಕಟಿಸುತ್ತಿದ್ದು, ಇದರಿಂದ ಕವಿಗೆ ಜೀವನವನ್ನು ನೋಡುವ ದೃಷ್ಟಿಯಿದ್ದು, ಸ್ಪಂದಿಸುವ ಹೃದಯದ ಜೊತೆಗೆ ಅನುಭವಕ್ಕೆ ಆಕಾರ ನೀಡುವ ಅಭಿವ್ಯಕ್ತಿ ಸಾಮರ್ಥ್ಯವಿರುವುದನ್ನು ತೋರಿಸುತ್ತದೆ. ಇಲ್ಲಿಯ ಅನೇಕ ವಚನಗಳು ಈ ಮಾತಿಗೆ ಸಾಕ್ಷಿಯಾಗಿವೆ. ಮಾನವನ ಸಹಜವಾದ ಸ್ನೇಹ, ಕರುಣೆ, ಸಹಕಾರ, ಪ್ರಾಮಾಣಿಕತೆ, ಗೌರವ ಭಾವಗಳಂತಹ ಗುಣಗಳನ್ನು ಬದುಕಿನಲ್ಲಿ ಕಾಣಬಯಸುವ ಕವಿ ತನ್ನ ವಚನಗಳಲ್ಲಿ ಅವುಗಳನ್ನು ಕೆಣಕುತ್ತಾನೆ. ಅಲ್ಲದೆ ಭಾವನೆಗಳಿಗೆ ತಕ್ಕ ಭಾಷೆಗಳನ್ನು ಬಳಸಿದ್ದು, ಗಮನಾರ್ಹ. ಈ ವಚನಗಳಲ್ಲಿ ಧರ್ಮವಿದೆ ಅದು ಮಾನವ ಧರ್ಮ. ಒಂದು ಮತವಿದೆ. ಮಾನವ ಮತ. ಅದೇ ಶಿವಪಥ ಸಾತ್ವಿಕ ಸ್ವಭಾವದ ಅನುಭಾವಿಯೋರ್ವನ ಗ್ರಂಥವಿದು. ಎತ್ತಿ ಓದಿದಾಗ ಮತ್ತೆ ಮತ್ತೆ ಓದಬೇಕೆನಿಸುವಂತಹದು."[೧೧] ಎಂದು ಹೇಳಿರುವ ವಿದ್ವಾಂಸರ ಮಾತು ಸತ್ಯವೆನಿಸುತ್ತದೆ. ಇಪ್ಪತ್ತನೇಯ ಶತಮಾನದ ಅಂತ್ಯದಲ್ಲಿ ಇಪ್ಪತ್ತೊಂದನೆಯ ಶತಮಾನದ ಆದಿಯ ಈ ಸಂಧಿಕಾಲದ ಸೂಕ್ಷ್ಮ ಪರಿವರ್ತನೆಯ ಸಂಕೇತಗಳು ವಚನಗಳಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ. ವಿಜ್ಞಾನ ಬೆಳೆದ ಎತ್ತರಕ್ಕೆ ಆಧ್ಯಾತ್ಮಿಕತೆಯು ಬೆಳೆದಿಲ್ಲ, ಹೀಗಾಗಿ ಇಂದು ಮಾನವನಲ್ಲಿ ಮಾನವತೆ ಕಣ್ಮರೆಯಾಗುತ್ತಿದೆ. ಜನರಲ್ಲಿ ವಿಜ್ಞಾನದ ಜೊತೆಗೆ ಆತ್ಮಜ್ಞಾನದ ಅರಿವು ಮೂಡಿಸಿ

**ಅಡಿಟಿಪ್ಪಣಿ**

೧೧ ಶತಕಾಂತ್ಯದ ವಚನ ಶತಕ-೨೦೦೧ ಡಾ॥ ಸೋಮನಾಥ ಯಾಳವಾರ (ಸಮಾಲೋಚನೆ) ಪು -೧೭

ವಿಶ್ವಶಾಂತಿಗೆ ದಾರಿದೀಪವಾಗಲೆಂದಾಗ ಇಪ್ಪತ್ತೊಂದನೆಯ ಶತಮಾನವು ವಿಶ್ವದಲ್ಲಿ ನಿಜವಾದ ಸುಖ, ಶಾಂತಿ, ಸಮೃದ್ಧಿ ನೆಲೆಸಿದಂತಾಗಲೆಂದು ಕವಿಯು ಪ್ರಮುಖ ಆಶಯವಾಗಿದೆ.

ಒಟ್ಟಾರೆ ಈ ಕೃತಿಯು ಹನ್ನೆರಡನೆಯ ಶತಮಾನದಲ್ಲಿಯ ಶರಣರ ಕೆಲವು ವಿಚಾರಗಳನ್ನು ಎತ್ತಿಕೊಂಡು ಸಮಕಾಲೀನ ಸಮಾಜದ ವಾಸ್ತವತೆಯೊಂದಿಗೆ ಹೋಲಿಸಿ ವ್ಯಂಗ್ಯವಾದ ರೀತಿಯಲ್ಲಿ ಚಿಂತನೆಗೊಳಪಡಿಸುತ್ತದೆ. ಓದುಗರನ್ನು ಸೂಚಿಸುತ್ತದೆ. ಅಲ್ಲದೆ ಹಲವು ವಚನಗಳು ಸಮಾಜದಲ್ಲಿನ ಅಸಮಾನತೆ ಬಗ್ಗೆ ವಿವರಣೆ ನೀಡಿ ಆಂತರಂಗಿಕ ನಿವೇದನೆಗೆ ಓದುಗರನ್ನು ಒಳಪಡಿಸುತ್ತದೆ.

**೭. ಧರಿನಾಡಿನ ಗಂಡುಗಲಿ ರಾಮಃ**

ಇದು ಬಂಡೆಪ್ಪ ಖೂಬಾ ಅವರು ರಚಿಸಿರುವ ಪ್ರಥಮ ಜೀವನ ಚರಿತ್ರೆಯಾಗಿದೆ. ಕನ್ನಡದಲ್ಲಿ ಜೀವನ ಚರಿತ್ರೆಗಳಿಗೆ ತನ್ನದೇ ಆದ ಒಂದು ಪರಂಪರೆಯಿದ್ದು, ಜೀವನ ಚರಿತ್ರೆ, ಆತ್ಮಕಥೆ, ವ್ಯಕ್ತಿ ಚಿತ್ರಣಗಳು ವ್ಯಕ್ತಿಯ ಕುರಿತಾಗಿಯೇ ಬರೆದಿರುವ ಕೃತಿಗಳಾಗಿವೆ. ಇಂಗ್ಲೀಷಿನ “ ‘ಬಯೋಗ್ರಾಫಿ’ ಎಂಬುದು ವ್ಯಕ್ತಿಯ ನಡುವಳಿಕೆ, ಘಟನೆಗಳು ವ್ಯಕ್ತಿ ಹಾಗೂ ಸಾಧನೆಗಳನ್ನು ಕುರಿತಾದ ವಿವರಗಳನ್ನು ‘ಜೀವನ ಚರಿತ್ರೆ’ ಅಭಿವ್ಯಕ್ತಿಸುತ್ತವೆ. ಜೀವನ ಚರಿತ್ರೆಯನ್ನು ಬರೆಯುವಾಗ ಕೇವಲ ಅಂಕಿ ಅಂಶಗಳನ್ನು ಕೊಡುವುದಿಲ್ಲ. ಆ ವ್ಯಕ್ತಿಯ ಜೀವನದ ಘಟನಾವಳಿಗಳನ್ನು ಆಯಾಕಾಲ ಪರಿಸರ, ಸಂದರ್ಭಗಳು ಕಾಲದ ಹಿನ್ನೆಲೆಯ ಪರಿಸರದಿಂದ ನೋಡುವುದು ಮುಖ್ಯವಾಗುತ್ತದೆ. ಇಂತಹ ಜೀವನ ಚರಿತ್ರೆಗಳಲ್ಲಿ ಸರಳತೆಯೊಂದಿಗೆ ವ್ಯಕ್ತಿಯ ಸಹಜ ಬದುಕನ್ನು ತಿಳಿಸುವ ಉದ್ದೇಶವಿರುತ್ತದೆ. ಅಂತಹ ಜೀವನ ಚರಿತ್ರೆಗಳಲ್ಲಿ ‘ಧರಿನಾಡಿನ ಗಂಡುಗಲಿ ರಾಮ”[೧೨] ವೂ ಒಂದು.

ದಲಿತ ನೇತಾರರು ಜಿಲ್ಲೆಯ ಹಿರಿಯ ಧುರೀಣ ಹಾಗೂ ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ರಾಮಚಂದ್ರ ವೀರಪ್ಪವರು ಈ ಭಾಗದ ಸಂಸದರಾಗಿ ಅವಿರತ ಸೇವೆ ಸಲ್ಲಿಸಿದ ಇವರು ‘ಸೋಲಿಲ್ಲದ ಸರದಾರ’ ಎಂಬ ಖ್ಯಾತಿಗೊಂಡವರು. ಇವರ ವ್ಯಕ್ತಿತ್ವ ಪಕ್ಷಾತೀತವಾಗಿತ್ತು. ಕೋಮುವಾದಿ ಪಕ್ಷವೆಂದು ಗುರುತಿಸಲ್ಪಡುವ ಪಕ್ಷದ ಅಭ್ಯರ್ಥಿಯಾಗಿ ಹೆಚ್ಚಿನ ಸಲ ಸಂಸದರಾಗಿ ಆರಿಸಿ ಬಂದಿದ್ದ ಇವರದು ಅಗಾಧ ವ್ಯಕ್ತಿತ್ವ. ಸರ್ವ ಪಕ್ಷದವರಿಂದ ಗೌರವಿಸಲ್ಪಡುತ್ತಿದ್ದ ಇವರನ್ನು ಹಾಗೆಯೇ ಚಿತ್ರಿಸಿರುವುದನ್ನಿಲ್ಲಿ ಕಾಣಬಹುದು.

---

**ಅಡಿಟಿಪ್ಪಣಿಃ**

೧೨. ‘ಧರಿನಾಡಿನ ಗಂಡುಗಲಿ ರಾಮ’ ೨೦೦೨ ಪು ಟ.೧೩ ಪ್ರಕಾಶಕರು : ಸಿದ್ಧಲಿಂಗೇಶ್ವರ ಪ್ರಕಾಶನ

ಇಪ್ಪತ್ತೊಂದನೇ ಶತಮಾನದಲ್ಲಿ ಬಾಳಿದ ಸುಮಾರು ಐವತ್ತು ವರ್ಷಗಳಿಂದ ರಾಜಕೀಯ ಕ್ಷೇತ್ರದಲ್ಲಿ ಮನೆ ಮಾತಾಗಿರುವ ಹಾಗೂ ಅವರು ಸಂಸದರಾಗಿದ್ದಾಗಲೇ ಶ್ರೀ ರಾಮಚಂದ್ರ ವೀರಪ್ಪ ಅವರ 'ಜೀವನ ಚರಿತ್ರೆ' ಯನ್ನು ಶ್ರೀ ಬಂಡೆಪ್ಪಾ ಖೂಬಾ ರವರು **'ಧರಿನಾಡಿನ ಗಂಡುಗಲಿ ರಾಮ'** ಎಂಬ ಹೆಸರಿನಿಂದ ಬರೆದಿದ್ದಾರೆ. ಇಂದಿನ ಹದಗೆಟ್ಟ ರಾಜಕೀಯದ ಅನೇಕ ಆಮೀಷಗಳ ಮಧ್ಯದಲ್ಲಿಯೂ ತನ್ನ ಆದರ್ಶ ಗುಣಗಳನ್ನು ಬಿಟ್ಟುಕೊಡದೇ ಬದುಕಿದ್ದ ವ್ಯಕ್ತಿ ಇವರು. ವಿದ್ಯೆಯ ದೃಷ್ಟಿಯಲ್ಲಿ ಅನಕ್ಷರಾದರು. ಬದುಕಿನ ದೃಷ್ಟಿಯಲ್ಲಿ ಸುಸಂಸ್ಕೃತರು. ಜೀವನದಲ್ಲಿ ಒಂದು ಆದರ್ಶವನ್ನು ಅಳವಡಿಸಿಕೊಂಡು ನುಡಿದಂತೆ ನಡೆದು ಶರಣ ಜೀವನವನ್ನು ಅನುಸರಿಸಿದವರು. ವ್ಯಕ್ತಿಯ ಶ್ರೇಷ್ಠತೆ ಹುಟ್ಟಿನಿಂದ ನಿರ್ಧಾರವಾಗುವುದಿಲ್ಲ; ಅದು ನಡತೆಯಿಂದ ಪರಿಗಣಿಸಲ್ಪಡುತ್ತದೆ ಎಂಬುದನ್ನು ತೋರಿಸಿದವರು. ಇವರು ತನ್ನ ಪ್ರದೇಶ ತನ್ನ ಜನರ ಅಭಿವೃದ್ಧಿ ಸಲುವಾಗಿ ಹಗಲಿರುಳು ದುಡಿದವರು. ಲೋಕಸಭೆಯ ಸದಸ್ಯರಾಗಿ ಜೀವಂತ ಇರುವ ವರೆಗೆ ಸೇವೆ ಸಲ್ಲಿಸಿದ್ದಾರೆ. ಆದರೆ ಎಂದೂ ಹಣ, ಅಧಿಕಾರ, ಕುರ್ಚಿಗಾಗಿ ಆಸೆ ಪಟ್ಟವರಲ್ಲ. 'ಎನ್ನಗಿಂತ ಕಿರಿಯರಿಲ್ಲ' ಎಂಬ ವಾಣಿಯನ್ನು ತನ್ನ ಜೀವನದಲ್ಲಿ ಅಳವಡಿಸಿಕೊಂಡ ಅಪರೂಪದ ವ್ಯಕ್ತಿಯಾಗಿದರಲ್ಲದೆ ರಾಜಕಾರಣಕ್ಕೊಂದು ಮಾದರಿಯಾಗಿದ್ದರು ಎಂಬುವುದನ್ನು ಇಲ್ಲಿ ವಿವರಿಸಲಾಗಿದೆ.

"ಲೋಕವೆಲ್ಲ ನನ್ನದು 'ನಾನೊಬ್ಬ ಲೋಕದ ಕಿಂಕರ'"[೧೩] ಎಂಬ ವಿಶಾಲ ಭಾವನೆ ರಾಮಚಂದ್ರಪ್ಪ ವೀರಪ್ಪರಲ್ಲಿ ಮನೆ ಮಾಡಿದೆ. ಅವರ ಸುಸಂಸ್ಕೃತ ನಡತೆ, ಕಾರ್ಯದಕ್ಷತೆ, ಕಾರ್ಯಕುಶಲತೆ, ಸಮಯ ಪ್ರಜ್ಞೆ, ಸಾರ್ವಜನಿಕ ಕಾಳಜಿಯಿಂದ ವಿಶೇಷವಾಗಿ ರಾಷ್ಟ್ರಪ್ರೇಮ ಇಲ್ಲಿ ಮನೆ ಮಾತಾಗಿತ್ತು. ಆತ್ಮ ವಿಶ್ವಾಸದ ಬಲದೊಂದಿಗೆ ತನ್ನ ಸುತ್ತಲ್ಲಿನ ಪರಿಸರ ಮತ್ತು ದೇಶದ ಶ್ರೇಯೋಭಿವೃದ್ಧಿ ಸಾಧಿಸಲು ಸದಾ ಪ್ರಯತ್ನಿಸುತ್ತಿದ್ದರು. ತಮ್ಮ ಪರಿಶುದ್ಧ ಜೀವನದಿಂದ ದೇಶಕ್ಕಾಗಿ, ಧರ್ಮಕ್ಕಾಗಿ ದುಡಿದ್ದುದ್ದು ಹಾಗೆಯೇ ಸಭೆ ಹಾಗೂ ಸಮಾರಂಭಗಳಲ್ಲಿ ಮಾತನಾಡುತ್ತಿದ್ದುದ್ದು ಇಲ್ಲಿ ಇಂದಿಗೂ ಸ್ಮರಣೀಯ ಸಂಗತಿಯಾಗಿದ್ದು, ಅದನ್ನು ಖೂಬಾರವರು ದಾಖಲಿಸಿದ್ದಾರೆ. ವ್ಯಕ್ತಿಯ ಸಮಷ್ಟಿ ನೆಲೆಯ ಪ್ರಜ್ಞೆಯನ್ನು ಪಡೆದುಕೊಂಡು ಕೆಲವೇ ಕೆಲವು ಅಪರೂಪದ ರಾಜಕಾರಣಿಗಳಲ್ಲಿ ತನ್ನ ಸ್ಥಾನ ಉಳಿಸಿಕೊಂಡು ಆ ಮೂಲಕ ಮಾನವೀಯ ಪ್ರಜ್ಞೆಯ ವ್ಯಕ್ತಿಗಳಲ್ಲಿ ಸಾತ್ವಿಕ ಪಥದಲ್ಲಿ ನಡೆಯುವುದು ಕೆಲವರಿಗೆ ಮಾತ್ರ ಸಾಧ್ಯ. ಅಂತಹ ವ್ಯಕ್ತಿಗಳ ಬದುಕು ಜನತೆಗೆ ಹೊಸ ಪಥವನ್ನು ತೋರಿಸುತ್ತದೆ. ಅವರಲ್ಲಿರುವ ಪ್ರಮಾಣಿಕತೆ, ದೇಶಪ್ರೇಮ, ಸಾಮಾಜಿಕ ಕಳಕಳಿ, ಜೀವನಕ್ಕೆ ಮಾದರಿಯಾಗಿ ನಿಲ್ಲುವಂತಹ ವ್ಯಕ್ತಿ. ಇವರು ಅನಗತ್ಯವಾಗಿ ಜನ ಸಾಮಾನ್ಯರ ಮೇಲೆ ನಡೆಯುತ್ತಿರುವ ಹಿಂಸೆ, ಕೌರ್ಯ, ಶೋಷಣೆ ಇತ್ಯಾದಿಗಳನ್ನು ಸದೆಬಡೆಯುವ ಸಲುವಾಗಿ ರಜಾಕಾರರ ಹಾವಳಿ ಪ್ರಸಂಗದ ಈ ಭಾಗದಲ್ಲಿ ತನ್ನ ಸಂಸಾರವನ್ನು ಪಣಕೊಟ್ಟು ಜೀವದ ಹಂಗುತೊರೆದು

**ಅಡಿಟಿಪ್ಪಣಿ:**

೧೩. 'ಧರಿನಾಡಿನ ಗಂಡುಗಲಿ ರಾಮ' ೨೦೦೨ ಪು.ಟ. XV ಸಂ. ಬಾಲಚಂದ್ರ ಜಯಶೆಟ್ಟಿ

ಜನತೆಗಾಗಿ, ರಾಷ್ಟ್ರದ ಸ್ವಾತಂತ್ರಕ್ಕಾಗಿ ಹೋರಾಡಲು ಮುಂದಾದರು ಇವರು. ಈ ಭಾಗದ ವಿವೇಚನಾ ಚಳುವಳಿಯಲ್ಲಿ ಮುಂಚೂಣಿಯಲ್ಲಿ ನಿಂತು ಹೋರಾಡಿದರು. ಆರ್ಯಸಮಾಜವನ್ನು ಸಂಘಟಿಸಿದ ಏಕಮೇವ ವ್ಯಕ್ತಿಯಾಗಿ ಆ ಸಮಾಜದ ಆದರ್ಶಗಳನ್ನು ಹೊತ್ತು-ಬೆಳೆಸಿ, ರಾಷ್ಟ್ರ ರಾಜಕಾರಣದಲ್ಲಿ ಗಮನ ಸೆಳೆದರು. ಇಟ್ಟ ಹೆಜ್ಜೆ, ತೊಟ್ಟ ರೂಪ ಬದಲಿಸದ ಅಪರೂಪದ ಜೀವಿಯಾಗಿ ಇದ್ದುಕೊಂಡು ಮುಂಬರುವ ಪೀಳಿಗೆಗೆ ಮಾದರಿಯಾಗಿ ನಿಂತಿರುವ ಅವರ 'ಜೀವನ ಚರಿತ್ರೆ' ಯನ್ನು ಹಲವು ಘಟನೆ ಹಾಗೂ ಸಂದರ್ಭಗಳ ಹಿನ್ನೆಲೆಯಲ್ಲಿ ಚಿತ್ರಿಸಿರುವುದನ್ನು ನಾವಿಲ್ಲಿ ಕಾಣಬಹುದು. ದಲಿತ ನಾಯಕನ ಮಾದರಿ ಜೀವನದ ಚರಿತ್ರೆಯನ್ನು ಈ ಮೂಲಕ ಖೂಬಾ ಅವರು ನೀಡಿದ್ದಾರೆ ಎಂದು ಹೇಳಬಹುದು.

## ಕವಿಗಳಾಗಿ ಬಂಡೆಪ್ಪ ಖೂಬಾ

ಸಮಕಾಲಿನ ಬದುಕನ್ನು ಅದರೊಂದಿಗೆ ಸಾರ್ವತ್ರಿಕವಾದ ಬದುಕಿನ ಸತ್ಯವನ್ನು ಹಾಗೂ ಪ್ರಸ್ತುತ ಬದುಕಿನ ಸಂಕೀರ್ಣತೆಗಳನ್ನು ಅರ್ಥವತ್ತಾಗಿ ವೇದ್ಯಗೊಳಿಸುವ ಬಂಡೆಪ್ಪ ಖೂಬಾರ ಸಾಹಿತ್ಯದಲ್ಲಿ ಹಲವಾರು ಜನಪರ ಕಾಳಜಿಗಳಿರುವುದನ್ನು ಗುರುತಿಸಬಹುದಾಗಿದ್ದು, ಅವುಗಳನ್ನು ಪ್ರಮುಖವಾದ ಕೆಳಗಿನ ಚಿಂತನೆಗಳ ಅಡಿಯಲ್ಲಿ ಅಧ್ಯಯನ ಮಾಡಬಹುದು.

೧. ಸಾಮಾಜಿಕ ಚಿಂತನೆಗಳು

೨. ರಾಜಕೀಯ ಚಿಂತನೆಗಳು

೩. ಸಾಂಸ್ಕೃತಿಕ ಚಿಂತನೆಗಳು

೪. ನಾಡು ನುಡಿ ಚಿಂತನೆಗಳು

೫. ವೈಜ್ಞಾನಿಕ ಚಿಂತನೆಗಳು

೬. ಆಧ್ಯಾತ್ಮಿಕ ಚಿಂತನೆಗಳು.

*** ಸಾಮಾಜಿಕ ಚಿಂತನೆಗಳು :**

ಸಮಾಜವೆಂಬುದು ಪ್ರಜ್ಞಾವಂತ ಜನರು ಸೃಷ್ಟಿಸಿದ ಸಂಘಟಿತ ವ್ಯವಸ್ಥೆ ಎನಿಸಿದ್ದು, ಅದು ಸಮಸ್ತ ಮಾನವ ಜನಾಂಗದ ಎಲ್ಲಾ ಸಾಮಾಜಿಕ ಸಂಬಂಧ ಮತ್ತು ಸಮೂಹಕ್ಕೆ ಅನ್ವಯಿಸಿ ಹೇಳುವ ಮಾತಾಗಿದೆ. "ಸಮಾಜ ಸಾಮಾನ್ಯವಾಗಿ ಸಾಮಾಜಿಕ ಸಂಬಂಧಗಳ ತೊಡಕಾಟಿದ ಸುತ್ತುಗುಟ್ಟಾಗಿದೆ ಮತ್ತು ಇದರ ಮೂಲಕ ಪ್ರತಿಯೊಬ್ಬ ವ್ಯಕ್ತಿಯು ತನ್ನ ಇತರ ಸಹವಾಸಿಗಳೊಂದಿಗೆ ಪರಸ್ಪರ ಸಂಬಂಧಗಳನ್ನು ಹೊಂದಿದ್ದಾನೆ"[೧] ಎಂದು ಗಿಸ್‌ಬರ್ಟ್ ಹೇಳಿರುವುದು ಈ ಸಂದರ್ಭದಲ್ಲಿ ನೆನಪಿಸಬಹುದು.

"ಮಾನವ ಸಮಾಜ ಜೀವಿಯಾಗಿರುವುದರಿಂದ, ಸಮಾಜದ ಘಟಕವಾಗಿರುವ ವ್ಯಕ್ತಿಯ ಜೀವನದ ವಿಕಾಸದಲ್ಲಿ ಸಮಾಜದ ಪಾಲಿರುವಂತೆ ಸಮಾಜದ ಸ್ಥಿತಿಗತಿಗೆ ಸಂಘರ್ಷ-ಸಾಮರಸ್ಯಕ್ಕೆ ವ್ಯಕ್ತಿಗಳದ್ದೂ ಪಾಲಿರುತ್ತದೆ. ಅಂತೆಯೇ ವ್ಯಕ್ತಿಯನ್ನುಳಿದ ಸಮಾಜಕ್ಕಾಗಲಿ, ಇಲ್ಲವೇ ಸಮಾಜವನ್ನುಳಿದ ವ್ಯಕ್ತಿಗಾಗಲಿ ಮಹತ್ವವಿಲ್ಲ. ಅವೆರಡೂ ಪೂರಕ ಅಷ್ಟೆ ಅಲ್ಲ; ಪರಸ್ಪರ ಪೋಷಕವೂ ಆಗಿವೆ. ಮನುಷ್ಯನ ಸುಖ-ದುಖ, ಅನುವು ಆಪತ್ತುಗಳಿಗೆ ಸಮಾಜ ವ್ಯವಸ್ಥೆಯಲ್ಲಿ ಕಾರಣಗಳು ದೊರೆಯುವಂತೆ, ವ್ಯಕ್ತಿಯ ಮಾತಿನಲ್ಲಾಗಲಿ, ಕೃತಿಯಲ್ಲಾಗಲಿ ಸಮಾಜದ ಬಗ್ಗೆ ಬೇಕಾದಷ್ಟು ಮಾಹಿತಿಗಳು ಸಿಗುತ್ತವೆ"[೨]. ಅದರಲ್ಲೂ ಕವಿ ಹೃದಯದ ವ್ಯಕ್ತಿಗಳಲ್ಲಿ ತೀವ್ರ ಸಂವೇದನಾ ಶೀಲತೆಯಿರುವುದರಿಂದ ಈ ಸ್ಪಂದನ ಅವರ ಕೃತಿಗಳ ಮೂಲಕ ಪ್ರಕಟಗೊಳ್ಳುತ್ತದೆ. ಇಂತಹವರ ಸಾಲಿನಲ್ಲಿ ಖೂಬಾರವರನ್ನು ಪರಿಗಣಿಸಬಹುದು. ಅವರ ಕೃತಿಗಳಲ್ಲಿ ಅನೇಕ ಸಾಮಾಜಿಕ ಬದುಕನ್ನು ಬಿಡಿಸಿ ತೋರಿಸುವ ಸಂದರ್ಭ ಘಟನೆಗಳಿದ್ದು, ಅವುಗಳನ್ನು ಸಾಮಾಜಿಕ ಚಿಂತನೆಗಳೆನ್ನಬಹುದು.

**ಅಡಿ ಟಿಪ್ಪಣಿ:**

೧. ಸಮಾಜಶಾಸ್ತ್ರದ ಮೂಲತತ್ವಗಳು-೨೦೦೦ ಬ್ಲಾಕ್-೨, ಪುಟ-೪ ಪ್ರ: ಕರಾಮುವಿ ಮೈಸೂರು.

೨. ಡಾ. ಸೋಮನಾಥ ಯಳವಾರ ಪುಲಿಗೆರಿಯ ಆದಯ್ಯ (ಪುಟ-೯೬)-೨೦೦೫ ಪ್ರ: ಚನ್ನಬಸವೇಶ್ವರ ಪ್ರಕಾಶನ ಹಾರಕೂಡ್

ಸಮಕಾಲೀನ ಸಾಮಾಜಿಕ ವ್ಯವಸ್ಥೆಯಲ್ಲಿಯ ಅಸ್ತ-ವ್ಯಸ್ತತೆಗಳು ಪ್ರಮುಖ ಸಮಸ್ಯೆಗಳು, ಅವರ ಮನಸ್ಸನ್ನು ಕೆಣಕಿವೆ. ಇಂದಿನ ಬದುಕಿನ ವಿವಿಧತೆಯನ್ನು ಕಾವ್ಯದ ಮೂಲಕ ನಮ್ಮ ಮುಂದಿಡುತ್ತಾರೆ. ಕುಟುಂಬವು ಒಂದು ಸಾರ್ವತ್ರಿಕವಾದ ಸಾಮಾಜಿಕ ಸಂಸ್ಥೆ. ಅಲ್ಲದೆ ಮಾನವನ ಸಾಮಾಜಿಕ ಜೀವನದ ತಳಪಾಯವಾಗಿದೆ. ಕುಟುಂಬವಿಲ್ಲದೆ ಸಮಾಜವಿಲ್ಲ, ನಮ್ಮ ಸಾಮಾಜಿಕ ಜೀವನಕ್ಕೆ ಒಂದು ನೆಲೆಯನ್ನು ಮತ್ತು ಸ್ಥಿರತೆಯನ್ನು ಕೊಡುತ್ತದೆ. ಕುಟುಂಬದ ಪ್ರತಿಯೊಬ್ಬ ಸದಸ್ಯನು ತನ್ನ ತನ್ನ ಕಾರ್ಯಗಳನ್ನು ಒಳ್ಳೆಯ ರೀತಿಯಿಂದ ನಿರ್ವಹಿಸಿದಲ್ಲಿ ತನ್ನ ತನದ ಅಸ್ತಿತ್ವ ಇರಲು ಸಾಧ್ಯ. ಎನ್ನುವುದನ್ನು

"ಬಾಳ ನಾಟ್ಯ ಶಾಲೆಯಲ್ಲಿ
ಯೋಗ್ಯ ಪಾತ್ರಧಾರಿಯಾಗಿ
ನಿನ್ನ ಕರ್ಮವನ್ನು ನೀನು
ಮಾಡಬೇಕು ಪೆದ್ದಜಿಮ್ಮ" (ಅ.ನ.ಸು.ಪೆ-೨೭೧) ಪು -೪೨

ಸಂಸಾರವು ಸುಖದಿಂದ ಕೂಡಿರಬೇಕಾದರೆ, ಜೀವನದ ಮೂಲ ಮಂತ್ರವಾದ ಹೊಂದಾಣಿಕೆಗೆ ಕವಿಯು ಮಹತ್ವ ಕೊಡುತ್ತಾರೆ. ಪ್ರೀತಿ, ಪ್ರೇಮಕ್ಕಿಂತ ಬದುಕಿನಲ್ಲಿ ಹೊಂದಾಣಿಕೆಯೇ ಪ್ರಮುಖತೆವೆಂಬುದನ್ನು

"ಸತಿಯ ಪತಿಯ ಮನಸು ಒಂದು
ಆಗಿ ಜಗದಿ ಬಾಳಬೇಕು
ತಾಳ ಮೇಳ ಇಲ್ಲದಾಗೆ
ಬಾಳು ಗೋಳು ಪೆದ್ದಜಿಮ್ಮ" (ಅ.ನ.ಸು.ಪೆ-೧೪೫) ಪು -೨೪

ಎನ್ನುವಲ್ಲಿ ಸಾಂಸಾರಿಕವಾದ ಸಾಮಾಜಿಕ ಗುಟ್ಟನ್ನು ಗಮನಿಸುತ್ತಾರೆ.

ಪುರಾತನ ಕಾಲದಿಂದಲೂ ಭಾರತವು ಅವಿಭಕ್ತ ಕುಟುಂಬ ತನ್ನ ತನವನ್ನು ಕಾಪಾಡಿಕೊಂಡು ಬಂದಿರುವುದಕ್ಕೆ ಕುಟುಂಬದ ಪ್ರತಿಯೊಬ್ಬ ಸದಸ್ಯರು ಕುಟುಂಬದ ಹಿತಕ್ಕಾಗಿ ದುಡಿಯುತ್ತಿದ್ದುದ್ದು ಕಾಣಸಿಗುತ್ತಿತ್ತು. ಆದರೆ ಕೈಗಾರಿಕಾ ಕ್ರಾಂತಿಯ ನಂತರ ಪರಿಸ್ಥಿತಿ ಬದಲಾಗಿದೆ. ಕುಟುಂಬವು ತನ್ನ ಆರ್ಥಿಕ ಪ್ರಾಮುಖ್ಯತೆಯನ್ನು ಬಹಳಷ್ಟು ಕಳೆದುಕೊಂಡಿದೆ ಎಂಬುದರಲ್ಲಿ ಎರಡು ಮಾತಿಲ್ಲವೆನ್ನಬಹುದು; ಕುಟುಂಬದ ಹೊರಗಡೆ ದುಡಿಯುವುದು ವಿಭಕ್ತ ಕುಟುಂಬಕ್ಕೆ ಎಡೆಮಾಡಿ ಕೊಟ್ಟಿರುವುದನ್ನು ಇಂದು ಕಾಣುತ್ತೇವೆ. ಇದರಿಂದ ವಿವಾಹಿತ ಮಕ್ಕಳು ತಮ್ಮ ತಂದೆ ತಾಯಿಯರನ್ನು ತೊರೆದು ಬೇರೆ ಕುಟುಂಬವನ್ನು ನಿರ್ಮಿಸಿಕೊಳ್ಳುವುದರಿಂದ ಹಿರಿಯರ ಬಗ್ಗೆ ಭಯ, ಭಕ್ತಿ ಕಳಚಿ ಹೋಗುತ್ತವೆ. ಈ ಸ್ಥಿತಿಯು ಕೌಟುಂಬಿಕ ವಿಭಜನೆಯಲ್ಲಿ ದುಷ್ಪರಿಣಾಮ ಬೀರುವುದರೊಂದಿಗೆ ಸಮಾಜದಲ್ಲಿ ಆ ಕುಟುಂಬದ ಒಡಕನ್ನು ತೋರಿಸುವುದನ್ನು ಕವಿಕಂಡು ಮರುಗುತ್ತಾನೆ.

"ಹೆತ್ತು ಹೊತ್ತು ಬೆಳಸಿದಂಥ
ತಂದೆ ತಾಯಿಯನ್ನು ಮರೆತ

ಜನ್ಮ ವ್ಯರ್ಥವಾಯಿತೆಂದು
ತಿಳಿಯದಾಯಿತು ಪೆದ್ದಜಿಮ್ಮ" (ಅ.ನ.ಸು.ಪೆ-೧೧೯) ಪು -೨೧

ಎನ್ನುವಲ್ಲಿ ಪ್ರಸ್ತುತ ಸಮಾಜದಲ್ಲಿ ವಯಸ್ಸಾದವರಿಗೆ ಇರುವ ಸ್ಥಾನ ಮಕ್ಕಳು ಹೆತ್ತ ತಂದೆ-ತಾಯಿಯನ್ನು ವೃದ್ಧಾಶ್ರಮಕ್ಕೆ ಕಳಿಸುತ್ತಿರುವ ಅಮಾನವೀಯ ಪ್ರಸಂಗಗಳನ್ನು ನೆನಪಿಗೆ ತರುತ್ತದೆ. ಎಲ್ಲವನ್ನು ಸಂಕೀರ್ಣತೆಯ ಗೋಲಿನಲ್ಲಿ ಅಳೆಯುವುದರಿಂದ ಇಂದು ಸಮಾಜ ವಿಭಕ್ತ ಕುಟುಂಬದ ಕಡೆಗೆ ಒಲುವು ತೋರುವುದರಿಂದ ಕುಟುಂಬದ ಮೂಲ ಒಗ್ಗಟ್ಟಿಗೆ ಕೊಡಲಿ ಪೆಟ್ಟು ಹೇಗೆ ಕೊಡುತ್ತದೆ ಎಂಬುದರ ಚಿಂತನೆಯನ್ನು ಕವಿ ಇಲ್ಲಿ ಮಾಡುತ್ತಾನೆ. ಅಷ್ಟೇ ಅಲ್ಲ ತಂದೆ-ತಾಯಿಯವರಿಂದ ಬೇರೆ ಜೀವನ ಸಾಗಿಸುವ ಮಕ್ಕಳಿಗೆ

"ಜನ್ಮ ಕೊಟ್ಟ ತಾಯಿ ತಂದೆ
ಯನ್ನು ಪಿಡಿಸುತ್ತಾ ನೀನು
ಮಡದಿ ಮಕ್ಕಳಲ್ಲಿ ನಲಿಯೆ
ಮುಕ್ತಿ ಸಿಗದು ಪೆದ್ದಜಿಮ್ಮ" (ಅ.ನ.ಸು.ಪೆ-೨೮೬) ಪು -೪೪

ಎನ್ನುವುದರೊಂದಿಗೆ ಶಾಪಹಾಕುವತ್ತಲೂ ಮುಂದಾಗುತ್ತಿರುವುದು ಗಮನೀಯ ಸಂಗತಿ.

ಇದರಿಂದ ಕುಟುಂಬದಲ್ಲಿರಬೇಕಾದ ಒಗ್ಗಟ್ಟು ಅಥವಾ ಐಕ್ಯತೆ ದುರ್ಬಲಗೊಳ್ಳುತ್ತದೆ. ಆದರೂ ಕೈಗಾರೀಕರಣ, ನಗರೀಕರಣ, ವೈಯಕ್ತಿಕತೆ ಮುಂತಾದ ಪ್ರಭಾವಗಳಿಗೆ ಮಾರು ಹೋಗಿ ವಿಭಕ್ತ ಕುಟುಂಬವು ಇಂದು ತ್ವರಿತ ಗತಿಯಲ್ಲಿ ಬದಲಾಗುವುದನ್ನು ಕಾರಣ ಸಹಿತವಾಗಿ ವಿವರಿಸುತ್ತಾರೆ. ಇದಕ್ಕೆ ಪರಿಹಾರ ನಾವೆ ಕಂಡುಕೊಳ್ಳಬೇಕಾಗಿದೆ. ಅದರಲ್ಲೂ ಮಡದಿಯ ಮಾತು ಕೇಳಿ ಮನೆ ಒಡೆಯುವವರಿಗೆ 'ಹಣ್ಣು ಎಲೆ ಉದುರುತ್ತಿರುವುದನ್ನು ಕಂಡು ಹಸಿರು ಎಲೆ ನಗುವಂತೆ' ಮಡದಿಯ ಮಾತಿಗೆ ಬೆಲೆಕೊಟ್ಟು ಹೆತ್ತ ತಂದೆ-ತಾಯಿಯವರಿಗೆ ಹಣ್ಣಾದ ವಯಸ್ಸಿಗೆ ಆಶ್ರಯ ನೀಡುವ ಬದಲಾಗಿ ಕಿರುಕುಳ ಕೊಡುವುದು ಸರಿಯೇ ? ಎಂದು ಪ್ರಶ್ನಿಸುತ್ತಾರೆ.

"ಮುಪ್ಪಾದ ತಂದೆಯನು
ಮುಪ್ಪಾದ ತಾಯಿಯನು
ಮಗನು ಕೊಲ್ಲುತ್ತಿಹನು
ಹೆಂಡತಿಯನು ನಂಬಿ
ಅವನ ಮಕ್ಕಳು ಮುಂದೆ
ಅವನನ್ನು ಈ ತೆರದಿ
ಮಾಡಿದರೆ ಹೇಗೆಂಬ
ಅರಿವು ಅವನಲ್ಲಿಲ್ಲ
ಯೌವನದ ಮದದಲ್ಲಿ
ತಂದೆ ತಾಯಿಗೆ ಮರೆತು

ಸಾಗುತ್ತಿರುವಂತಾದ
ಬಾಳಗೋಳನು ಕಂಡು
ಸಂಸಾರದೀ ಆಟ ನೋಡದಂತಾಗಿಹುದು ಹುಲಿಯಸಿದ್ದೇಶ್ವರಾ ।।"

(ಶ.ವ.ಶ–೪೫) ಪು –೪೫

ಎನ್ನುವಲ್ಲಿ ಈ ಸಂದರ್ಭವನ್ನು ಅರಿಯಬಹುದಾಗಿದೆ.

ಇಂದಿನ ವಿಭಕ್ತ ಕುಟುಂಬದಲ್ಲಿ ತಾಯಿಯ ಬಗ್ಗೆ ಕಾಳಜಿ ಮರೆಯಾಗಿರುವುದನ್ನು, ಅದಕ್ಕಾಗಿ ಕವಿಯು ಜನತೆಯ ಆತ್ಮಾವಲೋಕಕ್ಕೆ ಕೈಹಾಕಿ ಕೆದಕುತ್ತಾನೆ. ಇಂದಿನ ಜಗತ್ತಿನ ರೀತಿ ವಿಚಿತ್ರ. ಅದನ್ನು ಕಂಡು ವ್ಯಥೆ ಪಡುವ ಕವಿಯು ಮನುಷ್ಯನ ಹುಟ್ಟನ್ನು ನೆನಪಿಸಿ, ಆಲೋಚನೆಗೆ ಹಚ್ಚುತ್ತಾನೆ.

"ಅವಳ ಬಸುರಿನಿಂದ ಬಂದ
ನಮ್ಮ ಮೂತ್ರ ಮಲಗಳನ್ನು
ಹೇಸದಂತೆ ತೆಗೆದು ನಮ್ಮ
ಬೆಳೆಸಿದಂಥ ತಾಯಿಯನ್ನು
ನಾವೇ ದೂರ ನೋಡುತಿರುವ
ಬಗೆಯು ನನಗೆ ತಿಳಿಯದಾಗಿ
ಒಂದು ಬಗೆಯ ವ್ಯಥೆಯ ತಾಪ
ದಿಂದ ಬಳಲುವಂತೆ ಆದ
ಸ್ಥಿತಿಯ ಗತಿಯನರಿಯದಾದೆ" (ಐ.ಅ.ಪೌ–೮) ಪು –೩೮

ಎನ್ನುವಲ್ಲಿ ಮೇಲಿನ ಮಾತಿಗೆ ಸಾಕ್ಷಿ ಸಿಗುತ್ತದೆ. ಇಂದಿನ ದಿನ–ಮಾನಗಳಲ್ಲಿ ಮಾನವೀಯತೆ, ಪ್ರೀತಿ–ವಿಶ್ವಾಸ, ಸಂಬಂಧಗಳು ಅರ್ಥ ಕಳೆದುಕೊಂಡಿವೆ. ಅವುಗಳ ಚಿಂತನೆಯ ಕಡೆಗೆ ಗಮನ ಹರಿಸಿದ ಕವಿ ತಾಯಿ ವಾತ್ಸಲ್ಯವನ್ನೇ ಅರಿಯದ ಮೂಢ ಜನರನ್ನು ಕಂಡು ಚಿಂತಾಕ್ರಾಂತನಾಗಿರುವುದು ಹಲವು ಸಂದರ್ಭಗಳಲ್ಲಿ ಕಾಣಸಿಗುತ್ತವೆ.

ಉದಾಃ "ಗಂಡನನ್ನೆ ಹೆಂಡತಿಯು
ಕೊಲಿಸುತ್ತಿಹಳಲ್ಲ
ತಂದೆ ತಾಯಿಗೆ ಮಗನು
ಬಳಸುತ್ತಿಹನಲ್ಲ
ಸಜ್ಜನರ ಸಜ್ಜನಿಕೆ
ದುರ್ಜನರ ದುರ್ನಡತೆ–
ಗಂಜುತ್ತ ಸಾಗಿರುವ
ಜಗದಾಟವನ್ನು ಕಂಡು
ಕಾಣದಂತಾಗಿ ಕಲ್ಲಾದೆ ನೀ ಹುಲಿಯ ಸಿದ್ದೇಶ್ವರಾ"

(ಶ.ವ.ಶ.–೧೧) ಪು –೧೧

"ಯಾರಿಗಾಗಿ ಯಾರು ಬೇಕು ಯಾರಿಗಾಗಿ ಯಾರು ಇಲ್ಲ
ಬೇಕು ಗೀಕು ಇಲ್ಲಗಿಲ್ಲ ಎಂಬು ಮಾತು ಶಿವನೆ ಬಲ್ಲ
ನಾರಿಗೊಬ್ಬ ಗಂಡ ಬೇಕು ಗಂಡಿಗೋರ್ವ ಪತ್ನಿಬೇಕು
ಅವಳಿಗಾಗಿ ಇವನು ಬೇಕು ಇವನಿಗಾಗಿ ಅವಳು ಬೇಕು
ಬೇಕು ಬೇಕು ಬೇಕು ಬೇಕು ಎಂಬ ಮಾತು ಸುಳ್ಳು ಅಲ್ಲ"

(ಐ.ಅ.ಪೌ-೧) ಪು -೩

ಮುಂತಾದವುಗಳು ಆಧುನಿಕ ಸಮಾಜದ ವಾಸ್ತವ ಚಿತ್ರಣವನ್ನು ಜನತೆಯ ಮುಂದಿಟ್ಟು, ಜನರ ನಗ್ನ ಚಿತ್ರ ಬಯಲಿಗೆಳೆದಿದ್ದಾರೆ. ದಿನೇ ದಿನೇ ಕುಟುಂಬದ ಗಾತ್ರ ಚಿಕ್ಕದಾಗುತ್ತ ಹೋಗುವುದರೊಂದಿಗೆ ವ್ಯಕ್ತಿಯ ಮನಸ್ಸು ಚಿಕ್ಕದಾಗುವುದಕ್ಕೆ ಎಡೆ ಮಾಡಿಕೊಡುತ್ತದೆ. ಕುಟುಂಬದ ಸಂಬಂಧದಲ್ಲಿ ಬಿರುಕುಂಟಾಗಲು ಕಾರಣವನ್ನು ತಿಳಿಸಿದ್ದಾರೆ. ಇಂದಿನ ಕೌಟುಂಬಿಕ ಜೀವನದಲ್ಲಿ ಶಾಂತಿ, ನೆಮ್ಮದಿ ಕಣ್ಮರೆಯಾಗಿದ್ದು, ಎಲ್ಲವು 'ನಾನು ನನ್ನದು' ಎಂದು ಹಪಹಪಿಸುವ ಜನರಲ್ಲಿ ಎಷ್ಟಿದ್ದರೂ ಇನ್ನೂ ಬೇಕು ಎಂಬ ಆಸೆ ಹೆಚ್ಚಾಗಿರುವುದನ್ನು ಎಲ್ಲೆಲ್ಲೂ ಕಾಣಬಹುದು. ಇದು ಜೀವನದ ಸರ್ವನಾಶಕ್ಕೂ ಕಾರಣವಾಗುತ್ತದೆ. ಜೀವನವೆಂದರೆ ಸುಖ-ದುಃಖಗಳ ಸಂಗಮ, ಅತಿಯಾದ ಸುಖವು ಬೇಸರ ತಂದರೆ ಅತಿಯಾದ ದುಃಖವನ್ನು ಎದುರಿಸಲು ಕಷ್ಟವಾಗುತ್ತದೆ. ಆದ್ದರಿಂದ ಸುಖ-ದುಃಖ ಅನುಪಾತವು ಸಮನಾಗಿರಬೇಕೆ ಹೋರತು "ಬೋರ್ಗರೆವ ಜಲಪಾತದಂತೆ ಎಲ್ಲವೂ ಕೊಚ್ಚಿಕೊಂಡು ಹೋಗಬಾರದು"

"ಹಿತಮಿತದಿ ಬೆರೆತಿರುವ
ಸುಖ-ದುಃಖಗಳ ಮಧುರ
ಮಿಲನದನುಭವ ಪಡೆದು
ಬದುಕುವುದೇ ಜೀವನವು"

(ಐ.ಅ.ಪೌ-೭) ಪು -೨೦

ಇವೆರಡೂ ಇರುವುದರಿಂದಲೇ ಜೀವನದ ಹಿರಿಮೆಗೆ ಮೆರಗು ಬಂದಂತಾಗುತ್ತದೆ. ಜೀವನವೆಂದರೆ, ಬೇಂದ್ರೆಯವರು ಹೇಳಿದಂತೆ 'ಸಮರಸವೇ' ಆಗಿದೆ ಎಂಬುದನ್ನು ಖೂಬಾ ಅವರ

"ಸುಖ ದುಃಖಗಳು ಬೆರೆತು ಜೀವನದ ಗುರಿಯಾಯ್ತು
ಬರಿ ಸುಖವು ಬೆಸತ್ತು ಅಗುವುದು ಕಿಂಚಿತ್ತು
ಬರೆ ದುಃಖ ಬೇಕಿಲ್ಲ ಎಂಬ ಮಾತಿನ ಸೋತ್ತು
ಜೀವನದ ಹೆಗ್ಗರುತು ಹುಲಿಯ ಸಿದ್ದೇಶ್ವರ" (ಯು-೫೨೦) ಪು -೭೭

ಎಂದು ತಿಳಿಸುತ್ತಾರೆ. ಕತ್ತಲೆಯ ಗರ್ಭದಲ್ಲಿ ಬೆಳಕು ಅಡಗಿರುವುದಂತೆ, ದುಃಖದ ಕೊನೆಗೆ ಸುಖ, ಸುಖದ ಕೊನೆಗೆ ದುಃಖ ಅಂಟಿಕೊಂಡಿರುತ್ತದೆ. ಆಧ್ಯಾತ್ಮಾನುಭಾವಿಯಾದ ಖೂಬಾರವರು ಈ ಚಿಂತನೆಯನ್ನು

---

**ಅಡಿ ಟಿಪ್ಪಣಿ**

೩. ಬಿ.ಎಸ್. ಖೂಬಾ 'ಐವತ್ತೆಂಟರಲ್ಲಿ ಅನುತ್ತರನ ಪೌರುಷ' (ಪು ೬-II) ಡಾ. ಮಾಣಿಕರಾವ ಧನಶ್ರೀ ಸಮರಸ ಪ್ರಕಾಶನ ಗುಲಬರ್ಗಾ-೧೯೯೫

"ಇಂದಿನ ದುಃಖವು ನಾಳೆಗೆ ಸುಖವು
ಖಂಡಿತ ತರುವುದು ಮರೆಯದಿರು
ತಡೆಯದಂತೆ ನಡೆ ಪಡೆವುದು ಮನವು
ಗಾಂಭೀರ್ಯದ ಗೌರವದುಸಿರು"

(ಐ.ಅ.ಪೌ–೩೦) ಪು –೪೭

ಎಂದು ಉಪದೇಶಿಸುತ್ತಾರೆ. ಸರಳ ಭಾಷೆ ಚಿಕ್ಕ ಪದಗಳ ಜೋಡಣೆಯುಳ್ಳ ಅವರ ಕವನಗಳು ಜನ ಸಾಮಾನ್ಯರಿಗೆ ಅರ್ಥವಾಗುವಂತಿರುವುದು, ಅವುಗಳ ವೈಶಿಷ್ಟ್ಯವೆನ್ನಬಹುದು. ಜೀವನವೆಂಬ ರಥಕ್ಕೆ ಒಂದು ಚಕ್ರ ಗಂಡನಾದರೆ ಇನ್ನೊಂದು ಚಕ್ರ ಹೆಂಡತಿಯಾಗಬೇಕು. ಅದರೊಟ್ಟೊಟ್ಟಿಗೆ ಈ ಚಕ್ರಗಳು ನಡೆದಾಗ ಮಾತ್ರ ರಥದ ಪ್ರಯಾಣ ಸುಗಮವಾಗಿರುತ್ತದೆ.

'ಹಣವೆಂದರೆ ಹೆಣವೂ ಬಾಯಿ ಬಿಡುತ್ತೆ' ಎಂಬಂತೆ ಹಣವು ಅಯೋಗ್ಯನನ್ನು ಯೋಗ್ಯನನ್ನಾಗಿ ಮಾಡುತ್ತದೆ. ಮುದುಕನಿಗೆ ಹರೆಯ ತುಂಬುತ್ತದೆ. ಹರೆಯದವನಿಗೆ ಮುದುಕನನ್ನಾಗಿ ಮಾಡುವಂತಹ ಮೋಡಿ ಅದಕ್ಕೆ ಇರುತ್ತದೆ. ಅದನ್ನು ಇಂದಿನ ವಾಸ್ತವಿಕ ಸಮಾಜದ ಹಿನ್ನಲೆಯಲ್ಲಿ ಕವಿಯು

"ದುಡ್ಡು ದಡ್ಡನನ್ನು ದೊಡ್ಡ
ಮನುಷ್ಯನಾಗಿ ಮಾಡಿ ಮತ್ತೆ
ದುಡ್ಡು ಇರದ ಪಂಡಿತನಿಗೆ
ಬಾಳಗೊಡದು ಪೆದ್ದಜಿಮ್ಮ" (ಅ.ನ.ಸು.ಪೆ.–೧೪೭) ಪು –೨೫

"ಹಣದ ಆಟ ಮಾಟ ಬೆಳೆದು
ಗುಣದ ಬೆಲೆಯು ಕುಗ್ಗುತಿಹುದು
ಗುಣವು ಮಾಯವಾಗುವಂಥ
ಕಾಲ ಬಂತು ಪೆದ್ದಜಿಮ್ಮ" (ಅ.ನ.ಸು.ಪೆ–೧೫೧) ಪು –೨೫

ಎನ್ನುವಲ್ಲಿ ಹಣದ ಮಹಿಮೆ, ಗುಣ, ಬೆಲೆ, ಆಟ ಪಾಠಗಳ ಸ್ಥಿತಿ ಇಂದು ಹೇಗಿದೆ ? ಎನ್ನುವುದನ್ನು ಅರುಹುತ್ತದೆ.

ಜೀವನವೆಂಬ ನಾಟ್ಯ ಶಾಲೆಯಲ್ಲಿ ಇಂದಿನ ಬದುಕು ಕೇವಲ ತೋರಿಕೆಯಿಂದ ಕೂಡಿದೆ. ನಮ್ಮ ಸುತ್ತಮುತ್ತ ಸುಳ್ಳಿನ ಸುಳಿದಾಟ ಹೆಚ್ಚಾಗಿದ್ದರಿಂದ ಸತ್ಯಕ್ಕೆ ಬೆಲೆಯಿಲ್ಲ, ಇಂದು ಮನುಷ್ಯನಲ್ಲಿ ಮಾನವೀಯ ಸಂಬಂಧಗಳು ಕಳಚಿ ಹೋಗಿವೆ. ಧನಮದದಿಂದ ಸಾಗಿಸುವ ಬಾಳಿಗೆ ಬೆಲೆ ಕೊಡುವ ಜನರಿರುವಾಗ ದುಡ್ಡಿಲ್ಲದನನಿಗೆ ಏನು ಬೆಲೆಯಿದೇ ? ಎಂಬುದನ್ನು ಕವಿಯು ಪ್ರಶ್ನಿಸಿ, ಆ ವಾಸ್ತವಿಕತೆಯನ್ನು ಹೇಳುತ್ತಾನೆ.

"ಜೀವನ ನಾಟ್ಯದಲ್ಲಿ ನಟನೆಯಾಗಿಹ ಬಾಳು
ಸತ್ಯಕ್ಕೆ ಬೆಲೆ ಇಲ್ಲ ಸುಳ್ಳು ಸುಳಿದಾಟದೋಳು

ಯಾರು ಯಾರಿಗೆ ಇಲ್ಲ ಧನಮದದಈ ಬಾಳು
ಧನಹೀನನಿಗೆ ಸಾವು ಹುಲಿಯಸಿದ್ದೇಶ್ವರಾ''   (ಯು-೭) ಪು -೦೪

ಎಂಬ ಮಾತಿನಲ್ಲಿ ಬಡವನ ಸಾವು ಇಂದು ಏಕಾಗುತ್ತಿದೆ? ಹೇಗಾಗುತ್ತಿದೆ ನೋಡು ಎನ್ನುವಂತಿದೆ. ಅವರ ಚಿಂತನೆ ಇಂದಿನ ಸಮಾಜದಲ್ಲಿ, ಸಾರ್ಥಕತೆಗಿಂತ, ಸ್ವಾರ್ಥ ಹೆಚ್ಚಾಗಿರುವುದರಿಂದ ಮಾನವತೆಯ ಕಣ್ಮರೆಯಾಗಿದ್ದು, ಇದು ಮನುಷ್ಯನ ಕಾರ್ಯವನ್ನು ಅವಲಂಬಿಸಿ ಸಾಗಿರುವುದರ ಕಡೆ ಕವಿ ನಮ್ಮ ಗಮನ ಸೆಳೆಯುತ್ತಾನೆ.

"ಎಲ್ಲಿ ನೋಡಿದಲ್ಲಿ ದುಷ್ಟ
ಕೂಟ ಹೆಚ್ಚುತ್ತಿರುವ ಕಷ್ಟ
ಕೊಟ್ಟು ಕುಣಿವ ಕಾಟದಿಂದ
ದೂರ ಸರಿಯೋ ಪೆದ್ದಜಿಮ್ಮ"   (ಅ.ನ.ಸು.ಪೆ-೫೦) ಪು -೧೧
ಎನ್ನುವಲ್ಲಿ,
"ಮನುಷ್ಯ ಪ್ರಾಣಿ ನಾನು ಏಕೆ
ಕೋಳಿ ಕುರಿಗಳನ್ನು ಕೊಂದು
ತಿನ್ನಬಾರದೆಂದು ಕೊಂಡು
ಕೊಂದು ತಿಂದು ತೇಗುತ್ತಿತ್ತು"   (ಐ.ಅ.ಪೌ-೫೦) ಪು -೬೯

"ನರನು ನರನ ಕೊಲ್ಲುತ್ತಿರುವ
ಹಿಂಸೆ ಕಪಟ ಮೊಸಕ್ಕಿರುವ
ಶಕ್ತಿ ಹಿತದ ನಡೆಯ ನುಡಿಗೆ
ಇಲ್ಲವೆಂದು ನರನು ಮರೆತ"   (ಐ.ಅ.ಪೌ.-೪೯) ಪು -೬೮

ಎಂದು ಹೇಳುವಲ್ಲಿ ಮನುಷ್ಯ ಸಾಗಿರುವ ದಾರಿ ಸರಿಯಾದುದಲ್ಲ, ಇದು ಸಾರ್ಥಕ ಜೀವನಕ್ಕೆ ಅಡ್ಡಿಯನ್ನುಂಟು ಮಾಡಿರುವುದನ್ನು ತಿಳಿಸುತ್ತಾರೆ. ಆದರ್ಶ ಬದುಕನ್ನು ಸದಾ ಇಷ್ಟ ಪಡುವ ಕವಿಯು ಸರಳ ಶುದ್ಧ ಬದುಕಿನ ಸಮಾಜವನ್ನು ಕಾಣಲು ಇಷ್ಟ ಪಡುತ್ತಾನೆ. ಬಾಳಿಗೆ ಬೆಲೆ ಬರಬೇಕಾದರೆ ಅದು ಹೀಗಿರಲಿ ಎಂಬುದು ಅವರ ಚಿಂತನೆ.

"ಹೇಗೆ ಬದುಕಬೇಕು ಎಂಬ
ಚಿಂತೆಯಲ್ಲಿ ಸೊರಗುತಿರುವ
ಸರಳ ಶುದ್ಧ ಬಾಳಗಿಲ್ಲಿ
ಬೆಲೆಯೆ ಇಲ್ಲ ಪೆದ್ದಜಿಮ್ಮ" (ಅ.ನ.ಸು.ಪೆ-೧೭೦) ಪು -೨೮

ಇದರಿಂದ ಮನದ ಒಳಗಡೆ ಹಾಗೂ ಹೊರಗಡೆ ಎರಡರಲ್ಲಿ ಭಯ ಕಾಣುತ್ತೇವೆ. ಶಾಂತಿ ಎಂಬುದು ಕೊರತೆಯಾಗಿ ಕಾಣುತ್ತಿದೆ. ಮನುಷ್ಯನ ಚೇತರಿಕೆಯ ಜೀವನಕ್ಕೆ ಸರಳತೆಯ ಅವಶ್ಯಕತೆ ಹೆಚ್ಚಿಸಿರುವುದನ್ನು ಕವಿ ತಿಳಿಸುವುದರೊಂದಿಗೆ ವಾಸ್ತವಿಕ ಬದುಕಿನ ಸಮಾಜದ ರೀತಿಯನ್ನು ತೋರಿಸುತ್ತಾನೆ.

"ಸರಳ ಜೀವನಕ್ಕೆ ಸರಳ
ಮಾರ್ಗ ಸಿಕ್ಕು ದುಷ್ಟ ಶಕ್ತಿ
ನಷ್ಟವಾಗಿ ದಿವ್ಯ ಭವ್ಯ
ಥಳಕು ಬರಲಿ ಪೆದ್ದಜಿಮ್ಮ"          (ಅ.ನ.ಸು.ಪೆ-೨೬೨) ಪು -೪೧

ದಲಿತರು, ಬಡವರನ್ನು ನಿರಂತರವಾಗಿ ಶೋಷಣೆಗೆ ಗುರಿ ಪಡಿಸುವ ಶ್ರೀಮಂತರು ಎಲ್ಲ ಕಾಲದಲ್ಲಿಯೂ ಕಾಣಸಿಗುತ್ತಾರೆ. ಬಡವರು ಆ ಶೋಷಣೆಗೆ ಬಲಿಯಾಗಿ ಒಂದೇ ಸಮನೆ ನರಳುತ್ತಾರೆ. ಈ ದಬ್ಬಾಳಿಕೆಯನ್ನು ಬಡವರು ಎಷ್ಟರ ಮಟ್ಟಿಗೆ ಸಹಿಸಬಹುದು ? ಅವರ ಸಹನೆಗೂ ಇತಿಮಿತಿ ಇಲ್ಲವೆ ? ಸಹನೆ ಮಿತಿ ಮೀರಿದರೆ ಏನೆಲ್ಲ ಅನಾಹುತ ಸಂಭವಿಸಬಹುದು ತಾನೆ ? ಆ ಶೋಷಣೆಯನ್ನು ಅಳಿಸಿ ಅವರನ್ನು ಉಳಿಸಿಕೊಳ್ಳಲು ಕವಿ ತಿಳಿಸುತ್ತಾನೆ. ಅದಕ್ಕೆ ಬೇಕಾಗಬಹುದಾದ ಶಕ್ತಿಯುಳ್ಳ ಮಾರ್ಗವನ್ನು ಅನುಸರಿಸಬೇಕು ಎಂಬುದರ ಕಡೆಗೆ ಕವಿಯು ಗಮನ ಹರಿಸುತ್ತಾನೆ.

"ಸಾಯುತಿರುವ ದಲಿತರನ್ನು
ಕೊಲ್ಲುತಿರುವ ಧನಿಕರನ್ನು
ಉಳಿಸಿ ಅಳಿಸುವಂತೆ ನಿನ್ನ
ಶಕ್ತಿ ಬೆಳೆಸು ಪೆದ್ದಜಿಮ್ಮ"  (ಅ.ನ.ಸು.ಪೆ-೧೫೩) ಪು -೨೫

ಅಸಹಜತೆಯ ವಿರುದ್ಧ, ಅಸಮಾನತೆಯ ವಿರುದ್ಧ ಸಿಡಿದೇಳುವುದನ್ನಿಲ್ಲಿ ಗುರುತಿಸಬಹುದು.

"ಸ್ವರ್ಣ ಸೌಧಗಳಲ್ಲಿ ಥಳಪಿದೆ
ದೀನ ಕುಟೀರಗಳಲ್ಲಿ ಕತ್ತಲೆ
ಬೆಳಕು ಇಲ್ಲಿ ನಿಶಿವ್ಯಾಪಿಸಿ ಬಿಟ್ಟಿದೆ
ಉದಯ ಕಾಣದಾ ದಲಿತ ಮನೆಗಳಲಿ
ಜ್ಯೋತಿಯಾಗಿ ಜನಿಸಿಲ್ಲಿ ನೀನು ಕವಿ" (ಐ.ಅ.ಪೌ-೬) ಪು -೨೬

ಸಮಾಜದಲ್ಲಿನ ಅಸಮಾನತೆಯ ನೈಜ್ಯ ಚಿತ್ರಣವನ್ನು, ಇಲ್ಲಿಯ 'ಸೌಧ' ಶ್ರೀಮಂತಿಕೆಯ ಸಂಕೇತವಾದರೆ ಕುಟಿರ ಬಡತನದ ಸಂಕೇತ. ಬಡವರ ಅಜ್ಞಾನ, ಬಡತನದ ವಿಪರೀತತೆ, ಅದರ ದುರುಪಯೋಗ, ಶ್ರೀಮಂತರ ಅಟ್ಟಹಾಸಗಳ ಚಿತ್ರಣವೆಲ್ಲ ಇಲ್ಲಿ ಕಾಣಸಿಗುತ್ತದೆ. ಶ್ರೀಮಂತರ ನಿರಂತರವಾದ ಶೋಷಣೆಗೆ ಒಳಗಾಗಿರುವ ಬಡವರ ಸ್ಥಿತಿ ಚಿಂತಾಜನಕವಾಗಿದೆ. ಅವರಿಗೆ ಸಮಾಜದಲ್ಲಿ ಯಾವೊಂದು ಸ್ಥಾನಮಾನವೂ ಇಲ್ಲ. ಹಸಿದ

ಹೊಟ್ಟೆಗೆ ಊಟವಿಲ್ಲ, ಮಾನ ಮುಚ್ಚಲು ಬಟ್ಟೆಯಿಲ್ಲ ಎಂಬುದರ ಚಿತ್ರಣವನ್ನು ಅವರು

"ಊಟಕ್ಕೆ ಗತಿಯಿಲ್ಲ
ತೊಡಲು ಬಟ್ಟೆಗಳಿಲ್ಲ
ವಾಸಕ್ಕೆ ಮನೆಯಿಲ್ಲ
ಹೇಗೆ ಬಾಳುವರವರು ?
ಬೆನ್ನು ಹೊಟ್ಟೆಗಳೆರಡು
ಒಂದಾಗಿ ಹೋಗಿರುವ
ಕಣ್ಣೀರು ಸುರಿಸುತ್ತ
ಸಾಲದಲಿ ಬಳಲುತ್ತ
ಸತ್ತು ಬದುಕುವ ಜನರ ಕಾಣರೇನು ?" (ಐ.ಅ.ಪೌ-೧೪) ಪು -೨೨

ಎಂದು ವಿವರಿಸುತ್ತಾರೆ, ಅಷ್ಟೇ ಅಲ್ಲ ಆ ಬಡತನಕ್ಕೆ ಕಾರಣ ಹುಡುಕುವ ಪ್ರಯತ್ನ ಮಾಡಿದ್ದಾರೆ. ಸಂವಿಧಾನದಲ್ಲಿದ್ದ ಸಮಾನತೆ ಎಂಬುದು ನಿಜವಾದ ಅರ್ಥದಲ್ಲಿ ನಮಗೆ ಲಭಿಸಿಲ್ಲ. ಜನ ನಾಯಕರಲ್ಲಿ ಹುದುಗಿರುವ ಸ್ವಾರ್ಥವೆ ಕಾರಣ. ಬಡವರ ಮತ್ತು ಶ್ರೀಮಂತರ ಮಧ್ಯೆ ಅಜಗಜಾಂತರ ವ್ಯತ್ಯಾಸವಿರುವುದನ್ನು ಕಂಡ ಕವಿ ನೊಂದುಕೊಂಡು ಬಡವರ ಸ್ಥಿತಿಗತಿಯನ್ನು ಚಿತ್ರಿಸುವುದರ ಜೊತೆಗೆ ವಾಸ್ತವ ಬದುಕನ್ನು ಗಮನಿಸಿ ಅದಕ್ಕೆ ಮುಖ್ಯ ಕಾರಣ ಸಾಲವೆಂದು ತಿಳಿಸಿ ಅದಕ್ಕೆ ಪರಿಹಾರ ಕಾಣದ ಇಂದಿನ ಸ್ಥಿತಿಗಾಗಿ ಮರುಗುತ್ತಾರೆ. ಸತ್ತು ಬದುಕುವ ಜನರನ್ನು ಕಾಣಿರೇನು ? ಎಂದು ಕಾಣಬೇಕಾಗಿರುವುದರ ಕುರುಡುತನವನ್ನು ಕಂಡು ರೋಷಗೊಳ್ಳುತ್ತಾರೆ.

"ಕುಡುಕ ಗಂಡನ ಕಾಟ
ತಾಳಲಾಗದ ಪತ್ನಿ
ತನ್ನ ತನುವಿಗೆ ಬೆಂಕಿ
ಹಚ್ಚಿಕೊಂಡಿಹುದಕ್ಕೆ
ಪತಿಯ ಕಾಟಕ್ಕೆ ನೋಂದು
ನೇಣಿನಲಿ ಸತ್ತಿದಕೆ
ಹಿನ್ನಲೆಯು ಏನಿಹುದು
ಧನದ ಮೋಹ ಸುರೆಯ ಸಂಗ
ಧರೆಯನ್ನು ಹೊತ್ತಿಸಿದೆ
ಧಗಿ ಧಗಿಸಿ ಉರಿಯುತ್ತಿದೆ

ಈ ದೃಶ್ಯಗಳ ನೆನಪು
ಮರುಕಳಿಸಿದಾಗೆಲ್ಲ
ಧಹಿಸುತಿಹುದೆನ್ನ ಮನ" (ಶ.ವ.ಶ.-೪೪) ಪು -೪೪

ಕುಡುಕತನ, ಹಣದ ಮೋಹಾಗ್ನಿ ಹೊತ್ತಿಕೊಂಡು ಇಂದಿನ ಮನೆ-ಮನಗಳನ್ನು ನಿರಂತರವಾಗಿ ಸುಡುತ್ತಿದೆ. ಇದರಿಂದ ಸಮಾಜ ಅಧಿಪತನದತ್ತ ಸಾಗಿ ಒಂದು ದಿನ ಸರ್ವನಾಶವಾಗುತ್ತದೆ ಎಂಬುದು ಕವಿಯ ಚಿಂತನೆ. ಕುಡುಕ ಗಂಡನಿಗೆ ಬಲಿಯಾಗುವ ಪತ್ನಿಯ ದೃಶ್ಯ ಸರ್ವಸಾಮಾನ್ಯ ಎಂಬಂತಿದೆ. ಕವಿಯನ್ನು ಅತಿಯಾಗಿ ಕಾಡುವ ಈ ಸಾಮಾಜಿಕ ಸಮಸ್ಯೆ ನಮ್ಮ ವಾಸ್ತವಿಕ ಬದುಕಿಗಂಟಿಕೊಂಡ ಶಾಪವಾಗಿದೆ. ಇದರ ಪರಿಹಾರದ ಚಿಂತನೆ ಕವಿಯನ್ನು ಕಾಡುತ್ತಿರುವುದನ್ನು ಇಲ್ಲಿ ಗುರುತಿಸಬಹುದಾಗಿದೆ. ವಾಸ್ತವಿಕವಾಗಿ ಯುವಕರು ಕುಡಿತಕ್ಕೆ ಶರಣಾಗಿ ಸಂಸಾರದ ಜವಾಬ್ದಾರಿಯನ್ನು ಕಡೆಗಣಿಸಿ ನೆಮ್ಮದಿಯನ್ನು ಹಾಳು ಮಾಡುವವರೇ, ಆದರೆ ಮುಂದಿನ ಗತಿ ಏನು ? ಎಂಬ ಚಿಂತೆ ಕವಿಯದು. ಅವರಿಂದ ಉಪಜೀವನಕ್ಕೆ ಗಳಿಸಲಾಗದಿದ್ದರೂ ಹಿರಿಯರು ಗಳಿಸಿದನ್ನು ಉಳಿಸುವುದು ಸಹ ಕಷ್ಟವಾಗಿದೆ. ಕಾರಣ ದುಶ್ಚಟಕ್ಕೆ ಬಲಿಯಾಗಿ ಇದ್ದ ಸಂಪತ್ತನ್ನೆಲ್ಲ ಪಣಕೊಡ್ಡಿ ಕುಡಿದ ಅಮಲಿನಲ್ಲಿ ಹೆತ್ತ ತಂದೆ-ತಾಯಿಯರನ್ನೆ ಜರಿಯುವ ದೃಶ್ಯವನ್ನು ಸಮಾಜದ ಇಂದಿನ ಹಲವು ಸಂದರ್ಭಗಳಲ್ಲಿ ಕಾಣುತ್ತಾರೆ. ಇಂತಹ ಯುವ ಪೀಳಿಗೆಯನ್ನು ಕಂಡು ಕವಿಯ ಮನಸ್ಸು ವ್ಯಥೆ ಪಡುತ್ತದೆ. ಅಷ್ಟೇ ಅಲ್ಲ ಇದರ ಪರಿಹಾರ ಹೇಗೆ ? ಎಂಬುದು ಅವರನ್ನು ಕಾಡುತ್ತಿರುವ ಚಿಂತೆ.

"ರಂಗಣ್ಣ ಬದಲಾದ ಕುಡಿಯುವುದು ಅತಿಯಾಯ್ತು
ಪಡೆದ ತಂದೆ ತಾಯ್ಗೆ ಅಮಲಿನಲಿ ಜರಿದಾಯ್ತು
ಸುಖ ಜೀವನಕ್ಕೆ ವಿಷಮ ಬೆರೆತು ಬಿಟ್ಟಂತಾಯ್ತು
ಬಾಳುವೆಯ ಗೋಳಾಯ್ತು ಹುಲಿಯ ಸಿದ್ದೇಶ್ವರಾ" (ಯು-೧೭) ಪು -೫

ಹಾಗೂ

"ಸುಖದಲ್ಲಿ ಬದುಕುತ್ತ ಹಿಗ್ಗುತ್ತಲಿರುವವರು
ಭೋಗದಲ್ಲಿ ಮೆರೆಯುತ್ತ ಸಾವು ಕಾಣದ ಜನರು
ಅಲ್ಪ ಅಮುಷ್ಯದಲ್ಲೆ ಬಹು ಜನರು ಸಾಯುವರು
ಇದು ಯಾವ ಆಟವೆ ? ಹುಲಿಯ ಸಿದ್ದೇಶ್ವರಾ" (ಯು-೧೬೮) ಪು -೨೭

ಎಂದು ಕೇಳುವಲ್ಲಿ ಇದನ್ನು ಗುರುತಿಸಬಹುದು ಇಂಥವರು

"ಕುಡಿತಕ್ಕೊಂದು ನೆಪವು ಬೇಕು
ಕುಡಿದು ಕುಡಿದು ಮತ್ತರಾಗಿ
ಆಡಬಾರದೆಲ್ಲ ಆಡಿ
ತತ್ವಜ್ಞಾನವೆಲ್ಲ ಮೂಡಿ

ಕೊನೆಗೆ ಏನು ತಿಳಿಯದಾಗಿ
ಸ್ತಬ್ಧರಾಗಿ ಬಿಡುವುದು"        (ಐ.ಅ.ಪೌ-೩೩) ಪು -೫೦

ಎಂದು ಕುಡುಕರ ನೆಪ; ಅಮಲಿನ ಸ್ಥಿತಿ ಕೊನೆಗೆ ನಿಶೆಯಲ್ಲೇ ಸ್ತಬ್ಧರಾಗುವುದನ್ನು ತಿಳಿಸುತ್ತಾರೆ. ಆ ಕುಡುಕರು ಒಮ್ಮೆ ಕುಡಿಯುವ ಚಟಕ್ಕೆ ಬಿದ್ದರೆ ಅವರು ದಾಸರಾಗುವುದನ್ನು

"ಅತ್ತರೇನು ಸತ್ತರೇನು
ನಾನು ನಿಮಗೆ ಬಿಡೆನು ಎಂದು
ಸುರೆಯು ಅವರನಣುಕಿಸುತ್ತ ನಕ್ಕ ಬಿಟ್ಟಿತು
ನನ್ನ ಗೆಳೆಯರಾದ ಮೇಲೆ
ನಾನು ನಿಮಗೆ ಬಿಡಲಿ ಹೇಗೆ
ಎಂದು ಹೇಳಿ ಅಟ್ಟಹಾಸದಿಂದ ನಕ್ಕಿತು"

(ಐ.ಅ.ಪೌ-೩೪) ಪು -೫೨

ಎಂದು ತಿಳಿಸುತ್ತಾರೆ.

ಇಂದು ಸುರೆಯ ಮೋಹದಲ್ಲಿ ಶರಣಾಗಿರುವ ಜನರ ಸಂಖ್ಯೆ ಹೇರಳವಾಗಿ ಲಭಿಸುತ್ತದೆ. ಮನುಷ್ಯನು ಮತಿಕೆಟ್ಟು ಹಂಗುತೊರೆದು ಬಾಳುವ ಪರಿ, ಆದರ್ಶದ ಕಣ್ಮರೆ ಮುಂತಾದ ದುಶ್ಚಟದಲ್ಲಿ ಮಗ್ನರಾಗಿರುವುದನ್ನು ಕಂಡ ಕವಿಯು ಆತಂಕ ಹೀಗೆ ವ್ಯಕ್ತ ಪಡಿಸುತ್ತಾರೆ.

"ಧರೆಹತ್ತಿ ಉರಿಯುತ್ತಿದೆ
ಸುರೆಯ ಸಾಮ್ರಾಜ್ಯದಲಿ
ಸುಂದರಿಯ ರಂಗದಲಿ
ಭಂಗವಾಗಿದೆ ಜೀವ
ಹಂಗಿನಲ್ಲಿ ಭಂಗಾಗಿ
ಬಾಳುತ್ತಿದೆ ತನುಮನವು
ಸಾಹಿತ್ಯ ಸೊರಗುತ್ತಿದೆ
ಆದರ್ಶ ಅಡಗುತ್ತಿದೆ
ಬರಿ ನಗ್ನ ದೃಶ್ಯವನೆ
ಸಾಹಿತ್ಯ ತೊರುತ್ತಿದೆ"        (ಶ.ವ.ಶ-೩೯) ಪು -೩೯

ಎಂದು ತಿಳಿಸಿ ಇದಕ್ಕೆ ಮುಖ್ಯ ಕಾರಣ ಮಾನವನಲ್ಲಿ ಹುದಗಿರುವ ಆಸೆ.

"ಆಶೆಗಂತು ಕೊನೆಯೇಯಿಲ್ಲ
ಮೋಹ ಪಾಶದಲ್ಲಿ ಸಿಲುಕಿ
ಜಗವೆ ಮುಳುಗಿ ಬಿಟ್ಟಿತಲ್ಲ"  (ಐ.ಅ.ಪೌ.-೧೫) ಪು -೨೭

'ಆಶೆಯೇ ದುಃಖಕ್ಕೆ ಮೂಲ' ಎಂದು ವಚನಕಾರರು ಹೇಳಿರುವುದನ್ನು ಜನವೊಂದು ಕಿವಿಯಲ್ಲಿ ಕೇಳಿ ಮತ್ತೊಂದು ಕಿವಿಯಿಂದ ಬಿಡುವ ರೀತಿ ಯಾವುದನ್ನು ಸರಿಯಾಗಿ ಲಕ್ಷವಿಡದೇ ಸಾಗುವ ಬದುಕಿನ ಉದಾಹರಣೆ ಈ ಅತಿಯನ್ನು ಬಿಡಬೇಕು. ಮನುಷ್ಯ ಆಶಾವಾದಿಯಾಗಿರಲಿ ಆದರೆ ಅವಕಾಶವಾದಿಯಾಗದಿರಲಿ ಎಂಬುದೇ ಕವಿಯ ಆಶಯವಾಗಿದೆ. ಇಂದಿನ ಜೀವನಕ್ಕೆ ಇದು ಸಮ್ಮತವಲ್ಲವೇ ? ಎಂಬುದನ್ನು ಕಾಣಬಹುದು. ಜನರಲ್ಲಿರುವ ಮೌಢ್ಯತೆಯನ್ನು ಹೊಗಲಾಡಿಸಿ ತಿದ್ದಿ ತೀಡಬೇಕು. ಅಲ್ಲದೆ, ಅವರ ಬದುಕಿನಲ್ಲಿರುವ ಕತ್ತಲೆಯನ್ನು ಹೊಡೆದೂಡಿಸಲು ಜ್ಞಾನದ ಬೆಳಕು ನೀಡಬೇಕು. ಎಂದು ಕವಿ ಕೇಳುವ ರೀತಿ

"ಅಡ್ಡ ಹಾದಿ ಹಿಡಿದು ನಡೆವ
ದಡ್ಡರನ್ನು ತಿದ್ದಿ ನಲಿವ
ಶುದ್ಧ ಬೆಳಕಿನಲ್ಲಿ ನಡೆವ
ವರವ ಕೇಳು ಪೆದ್ದಜಿಮ್ಮ" (ಅ.ನ.ಸು.ಪೆ-೪೭) ಪು -೧೦

ಇಲ್ಲಿ ಉಪದೇಶದಂತೆ ಕಂಡರೂ ಸಹ ಅವರಿಗೆ ಶಿಕ್ಷಣದ ಅಗತ್ಯವಿದೆ. ಎಂದು ಹೇಳುತ್ತಿರುವುದು ಗಮನಾರ್ಹ ಅಂಶ. ಜನರಿಗೆ ಅಂತರಂಗದ ಜ್ಞಾನದ ಅವಶ್ಯಕತೆ ಇದೆ. ಬಸವಣ್ಣನಂತಹ ಸಮಾಜ ಸುಧಾರಕರು ಈ ನಾಡಿನಲ್ಲಿ ಆಗಿ ಹೋಗಿದ್ದರೂ, ಅವರ ಅನೇಕ ತತ್ವ-ಸಿದ್ಧಾಂತಗಳು, ಹೇಳಿಕೆಗಳು ಇಂದಿನ ಸಮಾಜದಲ್ಲಿ ವಿರುದ್ಧವಾಗಿ ಬಳಕೆಯಲ್ಲಿರುವುದನ್ನು, ವ್ಯಂಗ್ಯವಾಗಿ ಹೇಳುತ್ತ ಆ ಸಮಾಜದ ಚಿತ್ರ ನೀಡುತ್ತಾರೆ.

"ಕದಿ ಬೇಗ ಕೊಲೆ ಮಾಡು
ಹುಸಿ ನುಡಿದು ನಲಿದಾಡು
ಮುನಿದು ಹೋರಾಡು
ನಿನ್ನ ಬಣ್ಣಿಸು ನೀನು
ಅನ್ಯರನು ಹಳಿಯುತ್ತ
ಅನ್ಯರೇಳಿಗೆ ಕಂಡು
ಅಸಹ್ಯ ಪಡು ನೀನು
ಸುಖದಿ ಬಾಳುವ ಹಾದಿ
ಬಹುಮುಖ್ಯ ನಿನಗೆ
ಅಂತರಂಗದ ಶುದ್ಧಿ
ನಿನಗೇಕು ಬೇಕುನುತ
ಬಾಳುತಿಹ ಜಗದಾಟ
ಬಸವಣ್ಣ ನೋಡಿದಹನೇ ಹುಲಿಯಸಿದ್ದೇಶ್ವರ" (ಶ.ವ.ಶ. -೯) ಪು -೯

ಏನು ಮಾಡಲು ಸಾಧ್ಯವಿದೆ ? ಎಂಬ ಅಸಹಾಯಕತೆಯನ್ನು ಸೂಚಿಸುತ್ತಾರೆ.

ಈ ವಚನ ವಾಸ್ತವಿಕ ಬದುಕಿಗೆ ಶುಭ್ರ ಕನ್ನಡಿ ಹಿಡಿಯುತ್ತದೆ. ಇದು ೧೨ನೇ ಶತಮಾನದಲ್ಲಿ ರಚಿತವಾದ 'ಕಳಬೇಡ ಕೊಲಬೇಡ.........' ಎಂಬ ವಚನದ ದಾಟಿಯನ್ನು ಇಲ್ಲಿ ವ್ಯಂಗ್ಯ ರೀತಿಯಲ್ಲಿ ಕಲಾತ್ಮಕವಾಗಿ ನಿರೂಪಿಸಿದಂತಹ ವಚನವಾಗಿದೆ. ಇಲ್ಲಿ ಗಮನಿಸಬೇಕಾದುದು ಮುಖ್ಯವಾಗಿ ಬಸವಣ್ಣನವರು ಹೇಳಿದ ವಚನ ನೇರ ಉಪದೇಶವಾಗಿದ್ದರೆ ಬಂಡೆಪ್ಪನವರ ಈ ವಚನ ವ್ಯಂಗ್ಯಾತ್ಮಕವಾಗಿದ್ದು, ನೇರವಾಗಿ ವ್ಯಕ್ತಿಗಳಿಗೆ ಚುಚ್ಚುವಂತೆ, ನಾಟುವಂತೆ ಇರುವುದರಿಂದ ಹೆಚ್ಚು ಪರಿಣಾಮ ಬೀರುತ್ತದೆ ಎಂದು ವಿದ್ವಾಂಸರು ಗುರುತಿಸಿದ್ದು ಸರಿಯಾಗಿದೆ.

ಭಾರತವು ಜಾತ್ಯಾತೀತ ರಾಷ್ಟ್ರ ಎಂಬುದನ್ನು ಗ್ರಂಥಗಳಲ್ಲಿ ಓದುತ್ತೇವೆ, ಈ ಶಬ್ದವನ್ನು ಕೇಳುತ್ತೇವೆ ಹೊರತು ವಾಸ್ತವಿಕ ಬದುಕಿನಲ್ಲಿ ಕೆಲವು ನಾಯಕರು, ಮುಖಂಡರು ತಮ್ಮ ಸ್ವಹಿತಕ್ಕಾಗಿ ಜಾತಿ-ಜಾತಿಗಳಲ್ಲಿ ಕಲಹವನ್ನುಂಟು ಮಾಡಿಸಿ, ಜಾತಿಯ ಹೆಸರನ್ನು ಮುಂದು ಮಾಡಿ ಮುಗ್ಧ ಜನರ ಅಮೂಲ್ಯ ಮತವನ್ನುಗಿಟ್ಟಿಸಿಕೊಂಡು ಅಧಿಕಾರದ ಗದ್ದುಗೆಯನ್ನೇರುವುದಲ್ಲದೆ, ಸಮಾಜದಲ್ಲಿ ಜಾತಿ – ಜಾತಿಗಳಲ್ಲಿ ಭೇದ ಭಾವ ಮೂಡಿಸಿ, ಕಲಹಕ್ಕೆ ದಾರಿ ಮಾಡಿಕೊಡುತ್ತಾರೆ. ಇದರಿಂದಾಗುವ ದುರಂತವೆಂದರೆ, ನಮ್ಮ ದೇಶದಲ್ಲಿರುವ ಹಲವು ಭಾಷೆಯ, ಹಲವು ಧರ್ಮ, ಪಂಗಡಗಳೆಲ್ಲರೂ ಒಂದಾಗಿ ವಿವಿಧತೆಯಲ್ಲಿ ಏಕತೆಯನ್ನು ಸಾರುವ ಬದಲಾಗಿ ಏಕತೆಯಲ್ಲಿ ಅನೇಕತೆಯನ್ನುಂಟು ಮಾಡುತ್ತಿದ್ದಾರೆ. ಹಾಗಾದರೆ ಇದು ಜಾತ್ಯಾತೀತತಯೇ ? ಎಂದು ಕವಿ ಪ್ರಶ್ನಿಸುತ್ತಾರೆ. ಇಲ್ಲಿ ಜಾತಿ ಎಂಬ ಬೀಜ ಸಮಾಜದಲ್ಲಿ ಬೇರು ಬಿಟ್ಟಿದಲ್ಲದೇ ಅದು ದಿನೇ ದಿನೇ ಹೆಮ್ಮರವಾಗಿ ಬೆಳೆಯುತ್ತಿದೆ. ಅಂದ ಮೇಲೆ ಧರ್ಮನಿರಪೇಕ್ಷತೆಯು ಹೇಗೆ ದೊರೆಯುದೆಂಬ ಚಿಂತೆ ಕವಿಯನ್ನು ಕಾಡುತ್ತಿದೆ. ಅದಕ್ಕಾಗಿಯೇ ಕವಿಯು

"ಜಾತಿ-ಜಾತಿಗಳಲ್ಲಿ
ವೈಷಮ್ಯವನು ಬೆಳಸಿ
ಓಟು ಗಿಟ್ಟಿಸಿಕೊಂಡು
ಜಾತಿ-ಜಾತಿಗಳಲ್ಲಿ
ಜಗಳ ಬೆಳೆಯುವ ಹಾಗೆ
ಮಾಡಿ ಭುಗಿಲೆಬ್ಬಿಸುತ
ಸಂಚು ಹೊಂಚಿನ ನಡುವೆ
ಸ್ವಾರ್ಥ ಸಾಧಿಸುತಿಹುದಕ್ಕೆ
ಈಗೀಗ ಜಾತ್ಯಾತೀತತೆ
ಎಂದು ಕರೆಯುವರಲ್ಲ
ಇದು ಯಾವ ಜಾತ್ಯಾತೀತತೆ?
ತಿಳಿಸು ಹುಲಿಯ ಸಿದ್ದೇಶ್ವರಾ!!!" (ಶ.ವ.ಶ-೧) ಪು -೧

"ಜಾತಿ–ಜಾತಿಗಳಲ್ಲಿ ಭೀತಿ
ಭಾವ ಬೆಳೆದು ಹಿತದ ರೀತಿ
ಮಾಯವಾಗುತ್ತಿರುವ
ನೀತಿ ಏಕೆ ಬಂತು" (ಅ.ನ.ಸು.ಪೆ–೧೬೫) ಪು –೨೭

"ಜಾತಿ ಭೇದದ ನೀತಿ ರಾಜಕಾರಣದಲ್ಲಿ
ಅತಿಯಾಗಿ ಬೆಳೆಯುತ್ತ ದೊಡ್ಡದಾಗಿರುವಲ್ಲಿ
ಧರ್ಮನಿರಪೇಕ್ಷತೆಯ ಭಾವ ಎಲ್ಲಿಹುದಲ್ಲಿ?
ಕಚ್ಚಾಟಕದು ಮಾರ್ಗ ಹುಲಿಯ ಸಿದ್ದೇಶ್ವರಾ" (ಯು–೪೦೦) ಪು –೬೦

ಈ ಶತಮಾನದಲ್ಲಿ ದೇಶದ ಎರಡು ಕಣ್ಣುಗಳಂತಿರುವ ಹಿಂದು–ಮುಸ್ಲಿಂರಲ್ಲಿ ಐಕ್ಯತೆ ಮೂಡಿ ಅಖಂಡತೆಗೆ ನಾಂದಿಯಾಗಬೇಕು. ಎಂಬುದು ಈ ಎಲ್ಲರ ಕನಸು.

"ಹಿಂದು ಮುಸ್ಲಿಂರಲ್ಲಿ ಬಾಂಧವ್ಯ ಬೆಳೆದು ಹೊಸ
ಐಕ್ಯತೆಯು ಭಾವನೆಯ ಅರಿವು ಮೂಡಿ ಸಮರಸ
ಭಾವದಲಿ ಒಂದಾಗಿ ಅಖಂಡತೆಗೆ ಹೊಸ ಹಾಸ
ಬರಬಹುದು ಎನಿಸುತಿದೆ ಹುಲಿಯಸಿದ್ದೇಶ್ವರಾ" (ಯು.–೪೦೪) ಪು –೬೦

ಎಂಬುದನ್ನು ಕವಿಯು ಇಲ್ಲಿ ಹೇಳುತ್ತಿರುವಲ್ಲಿ ಈಗಿರುವ ಅನೇಕತೆಯನ್ನು ಅದು ತೋರಿಸುತ್ತಿದೆಯಲ್ಲವೇ ? ಚಪ್ಪಾಳೆ ತಟ್ಟುವುದು ಒಂದು ಕೈಯಿಂದಲ್ಲ ಅದಕ್ಕೆ ಎರಡು ಕೈಗಳು ಬೇಕು. ಅದಕ್ಕಾಗಿ ನಿನ್ನೆಯ ದಿನ ತಪ್ಪುಯಾರದು ಎಂದು ಮನಸ್ಸಿನಲ್ಲಿಟ್ಟುಕೊಳ್ಳದೇ, ವಾಸ್ತವ ಬದುಕಿಗೆ ಸ್ನೇಹಪರ ಭದ್ರವಾದ ತಳಪಾಯ, ಹಾಕಬೇಕಾಗಿ ಕವಿ ಹಾರೈಸುತ್ತಾರೆ. ಬರುವ ಹೊಸ ಯುಗದಲ್ಲಿ ಎಲ್ಲರಲ್ಲಿ ಹೊಸ ಚೈತನ್ಯ ಮೂಡಲೆಂದು ಕವಿಯ ಆಶಯವು ಮಹತ್ವದ್ದಾಗಿದೆ. ಹೊಸ ಶತಕವು ಎಲ್ಲರ ಬಾಳಿನಲ್ಲಿ ಹೊಸ ಬೆಳಕು ಕಾಣಲೆಂದು ಕವಿಯು ಬಯಸುತ್ತಾನೆ.

"ಹಳತೆಲ್ಲ ಹೋಗಿ ಹೊಸ ಚೈತನ್ಯ ಮುಡಿದರೆ
ವಿಶ್ವದಲ್ಲಿ ಶಾಂತಿ ಸದ್ಭಾವಗಳು ಹೊಳೆಯುತಿರೆ
ಹೊಸ ಶತಕ ಹೊಸ ಬೆಳಕು ಕಾಣುವಂತಾಗಿದರೆ
ನಿನ್ನ ಲೀಲೆಗೆ ಮೆರುಗು ಹುಲಿಯ ಸಿದ್ದೇಶ್ವರಾ" (ಯು–೭೪) ಪು –೧೩

ಅದಕ್ಕಾಗಿ ಸುವರ್ಣ ಮಹೋತ್ಸವದ ಅಂಗವಾಗಿ ಸಂಸತ್ತಿನ ವಿಶೇಷ ಅಧಿವೇಶನ ನಡೆಸಲಾಯಿತು. ಅಲ್ಲಿನ ವಿಶೇಷತೆಯೆಂದರೆ, ನಾಯಕರ ಆವೇಶದಿಂದ ಕೂಡಿದ ಮಾತುಗಳಾಗಿದ್ದವು. ಅಲ್ಲಿ ದಲಿತ ಬಂಡಾಯಗಳ ಕ್ರಾಂತಿ ನಾದವು ಊದಿದಲ್ಲದೆ ಬಡವರನ್ನು ಬಡಿದೆಬ್ಬಿಸುವುದು ಮರೆಯುವಂತಿಲ್ಲ. ಎಂಬುದನ್ನು ಕವಿಯು

"ಭಂಡತನದಲಿ ಮರೆವ ಹಾಗೆ
ಆಗಿದೆ ತಂತ್ರ ಮಂತ್ರ ಸಿದ್ಧಿಗೆ ಕೊಡಲಿ ಪೆಟ್ಟು
ಹಾಕುವ ಸೂತ್ರ ಬಂಡಾಯ ದಲಿತವದು
ಕಾವ್ಯ ರೂಪದಿ ಮಾತ್ರ ಬೆಳಕು ಕಂಡರೆ ಸಾಕೆ ! (ಯು–೧೯೪) ಪು –೩೦

ಎಂದು ಪ್ರಶ್ನಿಸುತ್ತ, ಆ ಸಂದರ್ಭದ ಚಿಂತನೆಯತ್ತ ಬೆರಳು ಮಾಡುತ್ತಾರೆ.

ಜನಸಂಖ್ಯೆ ಹೆಚ್ಚಾದಂತೆ ಸುಖ, ಶಾಂತಿ ಕ್ಷಿಣಿಸುತ್ತಿದೆ. ಮುಂದೇನು ? ಎಂಬ ಪ್ರಶ್ನೆ ಎಲ್ಲರನ್ನು ಕಾಡುತ್ತಿದೆ. ಆದರೂ ಅದರ ಹೊಣೆಗಾರಿಕೆಯನ್ನು ಯಾರು ಹೊರುವುದಿಲ್ಲ. ಜನಸಂಖ್ಯೆ ಸ್ಫೋಟದಿಂದ ಜನರಲ್ಲಿ ವಿಷಮತೆಯು ಮನೆ ಮಾಡಿತು. ಜನರ ಬದುಕುವ ರೀತಿಯಲ್ಲಿ ಸ್ವಾರ್ಥವು ಹೆಚ್ಚಾಗಿ ಕಂಡು ಬರುತ್ತಿರುವುದು ಇದರಿಂದ ಅವರಲ್ಲಿರಬೇಕಾದ ಮನುಷ್ಯತ್ವವು ಮಾಯವಾಗುತ್ತಿರುವುದು ಇದನ್ನು ಹೀಗೆ ಬಿಟ್ಟರೆ ಮುಂಬರುವ ದಿನಗಳು ತುಂಬ ಹಾನಿಕಾರಕವಾಗಿ ಬಿಡುವುದು. ಈ ಪ್ರಸಂಗ ಸಮಾಜದ ಮೇಲೆ ದುಷ್ಪರಿಣಾಮ ಬೀರುವುದನ್ನು ತಪ್ಪಿಸಲಾಗದೆಂದು ಕವಿಯು ಹೇಳುವಲ್ಲಿ ಜನಸಂಖ್ಯೆ ಹೆಚ್ಚಳದಿಂದಾಗುವ ದುಷ್ಪರಿಣಾಮದ ಭೀಕರತೆಯ ಚಿತ್ರ ಕಣ್ಣುಕಟ್ಟಿ ನಿಲ್ಲುತ್ತದೆ ಹಾಗೂ ಸಮಾಜದ ಮುಖ್ಯ ವಾಹಿನಿಯ ಸಮಸ್ಯೆ ಎದುರಾಗುತ್ತದೆ. ಅಲ್ಲವೇ ?

"ಈರುಳಿ ಸಿಗದಾಯ್ತು
ಉಪ್ಪಿಲ್ಲದಂತಾಯ್ತು
ಜೋಳ ಬೇಳೆಯ ಕಾಳು
ಕೈಗೆಟುಕದಂತಾಯ್ತು
ಅಕ್ಕಿ ಸಕ್ಕರೆಗಾಗಿ
ಪರಿತಪಿಸುವಂತಾಯ್ತು
ಮಳೆಯಿಂದ ಬೆಳೆ ಹೋಯ್ತು
ಮಳೆಗಾಗಿ ಬೆಳೆ ಹೋಯ್ತು
ಜನಸಂಖ್ಯೆ ಹೆಚ್ಚಾಯ್ತು
ಬಡವರಲ್ಲಿ ಬಡತನವು
ಮಿತಿ ಮೀರಿ ಬೆಳೆದಾಯ್ತು
ಶ್ರೀಮಂತರಲ್ಲಿ ಧನವು
ಮತ್ತಷ್ಟು ಹೆಚ್ಚಾಯಿತು
ಜನರ ಜೀವನ ಗತಿಯು
ಕ್ರಿಮಿ ಕೀಟದಂತಾಯ್ತು
ಬದುಕ ಬೇಕೆಂಬಾಶೆ

ಸುಟ್ಟು ಸುಡುಗಾಡಾಯ್ತು
ಹೇಗೆ ಜೀವಿಸಬೇಕು? ಹುಲಿಯಸಿದ್ದೇಶ್ವರಾ'' (ಶ.ವ.ಶ-೯೦) ಪು -೯೦

ಎಂಬಂತಹ ಮಾತುಗಳಿಂದ ಮುಂದಿನ ಅದರ ಚಿತ್ರ ಕೊಡುತ್ತಾರೆ.

ಇಂದು ಸಮಾಜದಲ್ಲಿ ಸರಳತೆಯನ್ನು ಮೈಗೂಡಿಸಿಕೊಂಡು ಮುನ್ನಡೆದರೆ ಸಾಲದು. ಏಕೆಂದರೆ ಎಲ್ಲಾ ಕಡೆಗಳಲ್ಲಿ ಮೊಸ, ವಂಚನೆ, ಕಪಟಗಳು ಮನೆ ಮಾಡಿರುವಾಗ ಸರಳ, ಸಾತ್ವಿಕ ನಡತೆಗೆ ಯಾವ ಬೆಲೆಯೂ ಇಲ್ಲ. ಈ ನಡತೆಯನ್ನು ಮೈಗೂಡಿಸಿಕೊಂಡವರು ಮೈಯಲ್ಲ ಕಣ್ಣು ಮಾಡಿಕೊಂಡು ಜಾಗೃತವಾಗಿರಬೇಕು. ಇಲ್ಲದಿದ್ದರೆ ಅವರ ಹೀಗೆ ಎಂಬುದು ಕವಿಯ ಅನಿಸಿಕೆ.

"ಸರಳ ಸಾತ್ವಿಕ ನಡತೆ ಬಲಿಯಾಗುವುದು ಮತ್ತು
ಕಾಲಮಾನದ ಗತಿಗೆ ಮೂಲಮಾನದ ಕತ್ತು
ಗುರಿಯಾಗಿ ಸೊರಗಿರುವ ಮನುಮತಿಗೆ ಆಪತ್ತು
ಕಟ್ಟಿಟ್ಟ ಬುತ್ತಿಯದು ಹುಲಿಯಸಿದ್ದೇಶ್ವರಾ '' (ಯು-೩೬) ಪು -೮

ಎಲ್ಲರು ಬಾಹ್ಯ ಸುಖಕ್ಕಾಗಿ ಮರುಳಾಗಿರುವುದರಿಂದ ತನ್ನ ನೆಮ್ಮದಿಯಲ್ಲದೇ ಸಮಾಜದ ನೆಮ್ಮದಿ ಹಾಳಾಗುವುದನ್ನು ಕಂಡ ಕವಿಯು ಸ್ಪಷ್ಟವಾದ ಉತ್ತರ ಕೊಡುತ್ತಾನೆ. ಈ ಜನರು ಹೆಣ್ಣು, ಹೊನ್ನು, ಮಣ್ಣಿನ ಮಾಯಕ್ಕಾಗಿ ನಿಜವಾದ ನೀತಿ, ಪ್ರೀತಿ, ಭೀತಿಗಳು ಬಲಿಯಾಗುವುದು ದುರಂತದ ವಿಷಯ.

"ಹೆಣ್ಣು ಹೊನ್ನು ಮಣ್ಣಿಗಾಗಿ
ಸಾಯುತಿಹರು ಮತ್ತರಾಗಿ
ನೀತಿ ಪ್ರೀತಿ ಭೀತಿಗಿಲ್ಲಿ
ನೆಲೆಯೆ ಇಲ್ಲ ಪೆದ್ದಜಿಮ್ಮ'' (ಅ.ನ.ಸು.ಪೆ-೧೫೦) ಪು -೨೪

ಎಂಬುದರಲ್ಲಿ ಇದನ್ನು ಕಾಣಬಹುದು. ಮನೆ ಮನೆಯಲ್ಲಿ ಕಾಣ ಸಿಗುವ ಸಮೂಹ ಮಾಧ್ಯಮ ಸಂಪರ್ಕದಿಂದ ಯುವಕರಲ್ಲಿ ಪ್ರೀತಿ-ಪ್ರೇಮವು ತೋರಿಕೆಯ ರೀತಿಯಲ್ಲಿ ಪ್ರದರ್ಶನಗೊಳ್ಳುತ್ತಿದೆ. ತಿಳಿದೋ, ತಿಳಿಯದೇಯೋ ಒಮ್ಮೆ ಇದರೊಳಗೆ ಬಿದ್ದರೆ ಅದರಿಂದ ಹೊರ ಬರಲು ಕಷ್ಟಸಾಧ್ಯ. ಈ ಪ್ರೇಮ ಪಥದ ಮೇಲೆ ಸಾಗುವವರು ಪ್ರೀತಿ ಬಿಟ್ಟು ಬೇರೇನು ಕಾಣಲಾರರು. ಆದಕ್ಕಾಗಿಯೇ "ಆಧುನಿಕ ಸಮಾಜದಲ್ಲಿ ಹೆಚ್ಚುತ್ತಿರುವ ಪ್ರೇಮ ವಿವಾಹಗಳು ಅವನತಿಯಲ್ಲಿ ಕೊನೆಗೊಳ್ಳುತ್ತವೆ. ವಿವಾಹದಲ್ಲಿ ಪೂರ್ಣಗೊಳ್ಳುವ ಎಲ್ಲಾ ಸಂಬಂಧಗಳು ಶಾಶ್ವತವಾಗುತ್ತಿಲ್ಲ. ಇಂದಿನ ಯುವಕರು ಪ್ರೀತಿಯ ರಾಗದಿಂದ ಮತಿ ಭ್ರಂಶರಾಗಿತ್ತಾದಾದ್ದರಿಂದ ವಿವಾಹ ಬಂಧನ ಎಷ್ಟು ಆಕಸ್ಮಿಕವಾಗಿರುತ್ತದೆಯೋ ಅಷ್ಟೇ ಬೇಗ ಪ್ರರ್ಯವಸನದಲ್ಲಿ ಕೊನೆಗೊಳ್ಳುತ್ತಲಿದೆ. ಸಾಂಪ್ರದಾಯಕ ಸಮಾಜದಲ್ಲಿ ಕಾಣುತ್ತಲಿದ್ದ ಗಂಡ-ಹೆಂಡತಿಯರಲ್ಲಿನ ಅನ್ಯೋನ್ಯ ಸಂಬಂಧ ಇಂದು ಕಾಣದಾಗಿದೆ''[*].

**ಅಡಿ ಟಿಪ್ಪಣಿ:**

೪. ಸಮಾಜಶಾಸ್ತ್ರ-೨೦೦೦, ಬ್ಲಾಕ್ -೩, ಪುಟ-೧೬, ಪ್ರಕಾಶಕರು ಕರಾಮುವಿ ಮೈಸೂರು.

"ಪ್ರೇಮದ ಆದಿಯು ಎಲ್ಲಿದೆ ಎಂಬುದು
ತಿಳಿಯುವುದತಿ ದುಸ್ತರವಿಲ್ಲ
ನಡೆಯುವುದಿದೆ ತಡೆಯುವುದಿಲ್ಲೆಂಬುದು
ಹೇಳುವರಾರೀ ಪಥದಲ್ಲಿ"

"ಕೆಲವರು ನಗುವರು ಕೆಲವರು ಆಳುವರು
ಸುಖ ದುಃಖಮಯ ಈ ದಾರಿಯಲ್ಲಿ
ತನು ಮನದಹಿಸಿ ಕರಗುವುದಾದರು
ಅಗ್ನಿಕಾಣ ದೀ ಪಥದಲ್ಲಿ"  (ಐ.ಅ.ಪೌ–೩) ಪು –೪–೫

ಅದರ ಆದಿ ಅಂತ್ಯ ತಿಳಿಯಲು ಹೇಗೆ ಸಾಧ್ಯ ? ಎಂಬ ಚಿಂತನೆಯು ಇಲ್ಲಿ ಅರ್ಥವತ್ತಾಗಿ ನಿರೂಪಿತವಾಗಿದೆ. ಪ್ರೀತಿ ಕುರುಡು; ಪ್ರೀತಿ ದೇವರು ಹೀಗೆ ಹಲವು ಅರ್ಥಗಳಿಂದ ಪ್ರೀತಿ, ಪ್ರೇಮವನ್ನು ಒಪ್ಪಿಕೊಳ್ಳುವ ಜನರ ಮನಸ್ಸಿನ ಮಾತು ಕವಿ ಒಮ್ಮೆ ಹೇಳಬಯಸಿದ್ದು, ಇಲ್ಲಿದೆ.

ಪ್ರತಿಯೊಬ್ಬರು ಪರರ ಸಂತೋಷದಲ್ಲಿ ತನ್ನ ಸಂತೋಷ ಕಾಣಬೇಕು. ಹಾಗೆಯೇ ಎಲ್ಲರೇಳಿಗೆಯಲ್ಲಿ ತನ್ನ ಏಳಿಗೆಯಾಗುವುದು? ಎಂಬ ವಿಶಾಲ ಮನೋಭಾವನೆ ಬೆಳೆಸಿಕೊಂಡಲ್ಲಿ ಜೀವನ ಹಸನಾಗುತ್ತದೆ. ತಾನು ಬದುಕಿ, ಪರರನ್ನು ಬದುಕಲು ಬೀಡುವ ಒಳ್ಳೆಯ ಸದ್ಭಾವನೆ ಪ್ರತಿಯೊಬ್ಬನು ಮೈಗೂಡಿಸಿಕೊಂಡಾಗ ಕೆಲವು ವರ್ಷಗಳಲ್ಲಿಯೇ ಸರ್ವರ ಬಾಳು ಸುಖ–ಶಾಂತಿಯಿಂದ ಕೂಡಿಕೊಂಡು ಅದಕ್ಕೊಂದು ಬೆಲೆ ಸಿಗಲು ಸಾಧ್ಯವೆಂಬುದು ಕವಿಯ ಅನಿಸಿಕೆ. ಎಲ್ಲರನ್ನು ಸನ್ಮಾರ್ಗದಲ್ಲಿ ನಡೆಯುವಂತೆ ದೇವರಲ್ಲಿ ಮೊರೆ ಹೋಗುವ ಅವರ ವಿಚಾರ ಈ ಭಾವನೆಯಿಂದ ಕೂಡಿದ್ದೆನಿಸುತ್ತದೆ.

"ಎಲ್ಲರೇಳಿಗೆಯಲ್ಲಿ
ತನ್ನ ಏಳಿಗೆ ಎಂಬ
ಬದುಕು ಬದುಕಲು ನೀನು
ಸಹಕರಿಸು ಎಂದೆಂಬ
ಸದ್ಭಾವ ಬೆಳೆಯುವುದು
ಮೂರು ವರ್ಷಗಳಲ್ಲಿ
ಶಾಂತಿ ಸುಖ ನೆಲೆಸುವುದು
ಸಮೃದ್ಧಿ ಕಾಣುವುದು
ಆತ್ಮ ತೇಜದ ಬೆಳಕಿನಲ್ಲಿ ಹುಲಿಯ ಸಿದ್ದೇಶ್ವರಾ"  (ಶ.ವ.ಶ –೯೪) ಪು –೯೪

"ಆಗ ನವಯುಗದುದಯ ಆಗುವುದು ಆನಂದ
ನೆಲೆಗೊಳ್ಳುವುದಂತಾಗಿ ಸರ್ವರಲಿ ಸುವಿನೋದ
ಸುಖ ಶಾಂತಿ ನಯ ನೀತಿ ಸದ್ಭಾವ ಮಯನಾದ
ಲೀಲೆ ಕಂಡಂತಾಗಿ ಹುಲಿಯ ಸಿದ್ದೇಶ್ವರಾ" (ಯು-೩೧೩) ಪು -೪೭

ಪ್ರತಿಯೊಬ್ಬ ಮನುಷ್ಯನಲ್ಲಿ ಜಾಗೃತೆಯನ್ನುಂಟು ಮಾಡು. ಮೊಸ, ವಂಚನೆಯಿಂದ ತಪ್ಪಿಸು, ದೇಶಾಭಿಮಾನ, ಮೂಡಿಸು ಮುಖ್ಯವಾಗಿ ಮಾನವತೆಯ ಬೀಜ ಬಿತ್ತಿ, ಸದ್ಭಾವ ಸುವಿಚಾರವನ್ನು ಕಾಣುವ ಕವಿಯ ಹಂಬಲ ಈ ಯುಗದಲ್ಲಿ ಆಗಲಿ ಎಂದು ಹೇಳುವುದು ಈಗಿನ ಸ್ಥಿತಿಯ ಚಿತ್ರಣವಾಗಿದೆ.

"ಜಗದ ಸೂತ್ರವು ಯಾರ ಕೈಯಲ್ಲಿ ಇದೆ ಹೇಳು
ಕಲ್ಲಾಗಿ ಕುಳಿತಿರುವ ನಿನಗೇಕೆ ಈ ಬಾಳು ?
ಸುಖ ದುಃಖ ನಿನಗಿಲ್ಲ ನಿರ್ಲಿಪ್ತ ಹಗಲಿರುಳು
ನಿನ್ನಂತೆ ನನಗಿರಿಸು ಹುಲಿಯ ಸಿದ್ದೇಶ್ವರಾ" (ಯು-೬೪) ಪು -೧೨

ಸಮಾಜದಲ್ಲಿರುವ ಪ್ರತಿ ಕುಟುಂಬಗಳು, ಕಾಯಕ ಜೀವಿಗಳಾದಾಗ ನೆಮ್ಮದಿ ಸಾಧ್ಯ. ಜೀವನದ ಮಾರ್ಗವೇ ಒಳ್ಳೆಯದನ್ನು ಗ್ರಹಿಸುವುದು ಅದರ ಸತ್ವದ ಬೆಳಕಿನಲ್ಲಿ ನಡೆಯುವಂತೆ ಆಶಿಸುವ ಕವಿ, ಶಿವಶರಣರ ಜೀವನ ಪಥದ ಮಹಾಮಾರ್ಗದಲ್ಲಿಯೇ ಮಾನವ ಕುಲ ಸಾಗಬೇಕು. ಅದರಿಂದ ಮಾನವತೆಯು ಸದಾ ಚಿಗುರಿಟ್ಟು ಬೆಳೆಯುತ್ತದೆ. ಈ ನಿಟ್ಟಿನಲ್ಲಿ ಸಂಸಾರವಿರಲಿ ಎಂಬುದು ಕವಿಯ ಹೇಳಿಕೆ ಅದನ್ನೆ ಅವರು

"ಸಾಹಿತ್ಯದಲ್ಲಿರುವ
ಸತ್ವವನ್ನು ಹೀರುತ್ತಾ
ಜೀವನದ ಮಾರ್ಗದಲಿ
ಬೆಳಕಾಗಿ ಕಾಣುತಾ
ಕತ್ತಲೆಯ ಹಾದಿಯಲಿ
ಹೋಗದಂತಿರಿಸುತ
ಶಿವಶರಣರಂತೆಮ್ಮ
ಬಾಳು ಹಸನಾಗಿಸುತ
ಮಾನವನ ಮಾನವತೆ
ಕುಗ್ಗದಂತಿರಿಸುತ್ತ
ಸಂಸಾರ ರಥ ನಡೆಸು ಹುಲಿಯ ಸಿದ್ದೇಶ್ವರಾ" (ಶ.ವ.ಶ -೬೧) ಪು -೬೧

ಎಂದು ಹೇಳಿದ್ದಾರೆ.

ಒಟ್ಟಿನಲ್ಲಿ ಈ ರೀತಿ ಹಲವಾರು ಸಾಮಾಜಿಕ ಸಮಸ್ಯೆಗಳನ್ನು, ಸಂಘರ್ಷ, ಸಂದರ್ಭಗಳನ್ನು ಅವುಗಳನ್ನು ತಿದ್ದುವ ರೂಪದಲ್ಲಿ, ನೈತಿಕತೆಯ ಜೀವನೋಪದೇಶವನ್ನು ಮಾಡುವ ರೂಪದಲ್ಲಿ ಒಮ್ಮೊಮ್ಮೆ ಅವುಗಳನ್ನು ವಿವರಿಸಿ ತಿಳಿಸುವ ರೂಪದಲ್ಲಿ ಚಿಂತನೆ ಗೈದಿರುವುದು ಎದ್ದು ಕಾಣುತ್ತದೆ. ಈ ದೃಷ್ಟಿಯಿಂದ ಬೀದರ ಜಿಲ್ಲೆಯ ಕವಿಗಳ ಸಾಲಿನಲ್ಲಿ ಬಂಡೆಪ್ಪ ಖೂಬಾರವರು ನಮ್ಮೆಲ್ಲರ ಹೆಮ್ಮೆಯ ಕವಿಯಾಗುತ್ತಾರೆ ಎನ್ನಬಹುದು.

* **ರಾಜಕೀಯ ಚಿಂತನೆಗಳು :**

ಸರಳ ಹಾಗೂ ಸೌಮ್ಯ ಜೀವಿಗಳಾದ ಬಂಡೆಪ್ಪ ಖೂಬಾ ಅವರದು ಅಪ್ಪಟ್ಟ ಕವಿ ಹೃದಯ. ರಾಜಕೀಯ ಬದುಕಿನ ಹಲವು ಸ್ವರೂಪ–ಕುರೂಪದ ಮುಖಗಳನ್ನು ಸುಮಾರು ಅರ್ಧಶತಮಾನಕ್ಕಿಂತಲೂ ಹೆಚ್ಚಿನ ವರ್ಷಗಳ ಕಾಲ ಕಂಡವರು. ಅಷ್ಟೇ ಅಲ್ಲ ಎಷ್ಟೋ ಸಂದರ್ಭಗಳಲ್ಲಿ ರಾಜಕೀಯ ಶಕ್ತಿಯುಳ್ಳವರ ಸಾಮಿಪ್ಯದಲ್ಲಿ ಉಳಿದು, ಅದರ ತೀವ್ರ ಪ್ರಭಾವಕ್ಕೊಳಕ್ಕಾಗಿ ಬೇಸತ್ತಿದ್ದಾರೆ. ಅದರ ಆಳ ಅನುಭವ ಅವರಿಗಿದೆ. ಆ ಜೀವನದಲ್ಲಿಯ ನೈಜ ರಾಜಕಾರಣವನ್ನು, ಅದರಿಂದಾದ ಜಾತಿ ಕಲಹ, ಭಾರತ ಸ್ವಾತಂತ್ರ್ಯದ ಸುವರ್ಣೋತ್ಸವದ ಸಂದರ್ಭ, ಲೋಕತಂತ್ರದಲ್ಲಿನ ಆಗು–ಹೋಗುಗಳು, ಮಂತ್ರಿಗಳ ಗುಣ–ಅವಗಣ, ರೀತಿ–ನೀತಿಗಳನ್ನು ಅನುಭವಿಸಿದವರು. ಅವು ಗಳನ್ನು ತಮ್ಮ ಸಾಹಿತ್ಯದಲ್ಲಿ ತುಂಬಾ ಸ್ಥೂಲವಾಗಿ ಒಮ್ಮೊಮ್ಮೆ ಸೂಕ್ಷ್ಮವಾಗಿ ವಿವರಿಸಿದ್ದಾರೆ.

ಇತ್ತೀಚಿನ ಐವತ್ತು ವರ್ಷಗಳಲ್ಲಿ ಮಾನವನು ಸಾಧಿಸಿದ್ದುದು ಏನು? ಎಂಬುದನ್ನು ರಾಜಕೀಯ ಚಿಂತನೆಗಳ ಹಿನ್ನೆಲೆಯಲ್ಲಿ ಅಭಿವ್ಯಕ್ತಪಡಿಸಿದ್ದುದು ತುಂಬಾ ಗಮನಾರ್ಹ ಸಂಗತಿ ಎನ್ನಬಹುದು. ಸಮಕಾಲೀನ ರಾಜಕೀಯ ವ್ಯವಸ್ಥೆಯಲ್ಲಿನ ಅಸ್ತವ್ಯಸ್ತೆಗಳು ಅವರ ಮನಸ್ಸನ್ನು ಕಲುಕಿವೆ. ಅವಿವೇಕಿಗಳಾದ ಸ್ವಾರ್ಥ ರಾಜಕಾರಣಿಗಳು ತಮ್ಮ ಅಧಿಕಾರದ ದಾಹಕ್ಕಾಗಿ ಮನುಷ್ಯ ಮನುಷ್ಯರಲ್ಲಿ ಜಾತಿ ಎಂಬ ಅಡ್ಡ ಗೋಡೆಯನ್ನು ಹೇಗೆ ಕಟ್ಟಲು ಪ್ರಯತ್ನಿಸುತ್ತಾರೆ ಎಂಬುವು ದನ್ನು ಹಲವು ಸಂದರ್ಭಗಳಲ್ಲಿ ತಿಳಿಸುತ್ತಾರೆ. ದಲಿತರನ್ನು–ಅಲ್ಪಸಂಖ್ಯಾತರನ್ನು ಹಿಂದುಳಿದ ವರ್ಗದವರನ್ನು ತಮ್ಮ ಓಟಿಗಾಗಿ ಬಳಸಿಕೊಳ್ಳುವ ರಾಜಕಾರಣಿಗಳನ್ನು ತರಾಟೆಗೆ ತೆಗೆದುಕೊಳ್ಳುವು ದರೊಂದಿಗೆ ಜಾತಿ ರಾಜಕಾರಣವನ್ನು ತೆಗೆದುಕೊಳ್ಳುತ್ತಾರೆ. ನಿಜವಾದ ಕಳಕಳಿಯಿಂದ ದಲಿತರನ್ನು ಮೇಲಕೆತ್ತದೆ ಮೇಲ್ಜಾತಿಯರನ್ನು, ಬಹು ಸಂಖ್ಯಾತರನ್ನು ಬಳಸಿಕೊಂಡು ತಮ್ಮ ಅಧಿಕಾರದ ಮೇಟ್ಟಿಲೇರುವು ದನ್ನು ತಿಳಿಸುತ್ತ ಖಂಡಿಸುತ್ತಾರೆ.

ಭಾರತವು ಸ್ವಾತಂತ್ರ್ಯ ಪಡೆದು ಐವತ್ತು ವರ್ಷಗಳ 'ಸುವರ್ಣ ಮಹೋತ್ಸವ'' ಆಚರಿಸುವ ಸಂದರ್ಭದ ನಮ್ಮ ಸಂಸತ್ತು ಹೊಸ ಬಗೆಯ ಚೈತನ್ಯ ಪಡೆಯ ಬೇಕೆಂಬುದು ಕವಿಯ ಹಂಬಲ. ಸಂಸತ್ತಿನಲ್ಲಿ ಕಚ್ಚಾಟ ಒಮ್ಮೊಮ್ಮೆ ಅತಿರೇಖದ್ದಾಗಿರುತ್ತದೆ. ಅದು ಹೋಗಬೇಕು ಈಗಲೂ ಶಾಸಕರು ಕರ್ತವ್ಯ ಪ್ರಜ್ಞೆ ಬೆಳೆಸಿಕೊಳ್ಳಲಿ ಎಂಬುದನ್ನು

"ಲೋಕತಂತ್ರದಿ ಬೇರೆ ತಂತ್ರ ಹೂಡದ ಹಾಗೆ
ಜನಸೇವೆ ಮಾಡುವಾ ಭಾವ ಶಾಸಕರೊಳಗೆ
ಮೂರ್ತರೂಪವತಾಳಿ ಬೆಳೆಯುತ್ತ ಜಗದೊಳಗೆ
ಬೆಳೆದು ನಿಲ್ಲಲಿ ದೇವ ಹುಲಿಯಸಿದ್ದಶ್ವರಾ''

(ಯು– ೩೧೯) ಪು –೪೮

ಎನ್ನುವಲ್ಲಿ ಅರಹುತ್ತಾರೆ. ಅಲ್ಲದೇ ರಾಜಕೀಯದಲ್ಲಿ ಮನುಷ್ಯ ಮನುಷ್ಯನಲ್ಲಿರಬೇಕಾದ ಪ್ರೀತಿ, ವಿಶ್ವಾಸ ಕಣ್ಮರೆಯಾಗಿ ಹೊಲಸಿನಿಂದ ಕೂಡಿದೆ. ಅದನ್ನು ಹೊಡೆದೋಡಿಸಲು ಕವಿಯು ಹಪಹಪಿಸುತ್ತಾನೆ.

ರಾಷ್ಟ್ರದ ಉನ್ನತ ಹುದ್ದೆಯ ಗದ್ದುಗೆಯನ್ನೇರುವ ರಾಷ್ಟ್ರಪತಿಯು ತನ್ನ ಸ್ವಹಿತಕ್ಕೆ ಬೆಲೆಗೊಡದೆ, ರಾಷ್ಟ್ರಕ್ಕಾಗಿ, ಆ ರಾಷ್ಟ್ರದ ಪ್ರಜೆಗಳ ಒಳಿತಿಗಾಗಿ ಹಗಲಿರುಳು ದುಡಿಯುವ, ಚಿಂತಿಸುವ ಕಾರ್ಯದಲ್ಲಿ ತೊಡಗದೇ, ತನ್ನ ಸ್ವಾರ್ಥಕ್ಕಾಗಿ ಉಪಯೋಗಿಕೊಂಡರೆ ಜೀವನದ ಮೌಲ್ಯಗಳು ಕುಸಿಯುವುದು ಸರ್ವೆ ಸಾಮಾನ್ಯ ಎಂದು ಕವಿಯು ತಿಳಿಸಿ ಜರಿಯುವದರೊಂದಿಗೆ ಅವನ್ನು ವ್ಯಕ್ತಗೊಳಿಸುವ ದಿಟ್ಟತನ ಮೆಚ್ಚುವಂತಹದು. ಯಾವುದೇ ಅಂಜು ಅಳಕು ಇಲ್ಲದೆ ವೈಜ್ಞಾನಿಕ ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ.

"ಅಮೇರಿಕೆಯ ರಾಷ್ಟ್ರಪತಿ
ಕ್ಲಿಂಟನರಂಥವರು
ಲೈಂಗಿಕದ ಅಟದಲ್ಲಿ
ಮರೆತು ನಲಿವಾಡಿದರೆ
ಸಾಮಾನ್ಯ ಜನರಲ್ಲಿ
ನೀತಿ ನೆಲೆಸುವುದೆಂತು,
ತೆರೆಯ ಬೀಳುವ ಹಾಗೆ
ಜೀವನದ ಮೌಲ್ಯಗಳು
ಕುಸಿಯುತ್ತ ನಡೆದಿಹವು
ಮಾಡಬೇಕೆನೆಂದು
ತಿಳಿಯದಂತಾಗಿಹುದು ಹುಲಿಯಸಿದ್ದೇಶ್ವರಾ"

(ಶ.ವ.ಶ.–೩೬) ಪು.೩೬

"ರಾಜಕಾರಣದಲ್ಲಿ ಬೆರೆತ
ಹೊಲಸು ಹೋಗಿ ನೀತಿ ಬೀತಿ
ಒಲವು ಪ್ರೀತಿ ಮೂಡಲೆಂಬ
ವರವ ಕೇಳು ಪೆದ್ದಜಿಮ್ಮ" (ಅ.ನ.ಸು.ಪೆ.– ೪೮) ಪು –೧೦

ಸ್ವಾರ್ಥ ರಾಜಕಾರಣಿಗಳಿಂದ ಆಗುವ ಅನಾಹುತ ಎಂತಹದು? ಎಂಬುವುದರ ಚಿಂತನೆ

" ರಾಜಕಾರಣಿಗಳ ಹುಚ್ಚು
ವರ್ತನೆಯಲ್ಲಿ ದೇಶಕೆಟ್ಟು
ಸರ್ವನಾಶವಾಗುವಂತಹ
ಕಾಲ ಬಂತು ಪೆದ್ದಜಿಮ್ಮ" (ಅ.ನ.ಸು.ಪೆ.– ೫೧) ಪು –೧೧

ಎಂಬಲ್ಲಿ ಕಾಣಸಿಗುತ್ತದೆ. ಇಂದಿನ ರಾಜಕಾರಣಿಗಳಲ್ಲಿ ದೇಶಪ್ರೇಮ ಮಾಯವಾಗುತ್ತಿದೆ. ದೇಶಪ್ರೇಮ ಬೆಳೆಸುವ, ದೇಶಕ್ಕಾಗಿ ತಮ್ಮ ಜೀವನವನ್ನು ಮುಡುಪಾಗಿಡುವ ಕಾಲ ಕೇವಲ ಇತಿಹಾಸದ ಪುಟದಲ್ಲಿ ನೋಡುವ ದಿನಗಳು ಸಂಭವಿಸುತ್ತಿವೆ. ನಿಜವಾದ ಅರ್ಥದಲ್ಲಿ ಹೇಳಬೇಕೆಂದರೆ ರಾಷ್ಟ್ರಕ್ಕಾಗಿ ದುಡಿಯುವ ಕಾಲ ದೂರ ಸರಿಯುತ್ತದೆ. ಹಾಗಾದರೆ ದೇಶದ ಹಿತಯಂತು? ಎಂಬುವುದನ್ನು

" ರಾಜಕಾರಣದಲ್ಲಿ ಹೊಲಸು
ಬೆರೆತು ದೇಶ ಹಿತವು ಮರೆತು
ಪಶುಗಳಂತೆ ಮಾನವತೆಯು
ಬಲಿಯು ಆಯ್ತು ಪೆದ್ದಜಿಮ್ಮ" (ಅ.ನ.ಸು.ಪೆ.- ೧೬೩) ಪು -೨೭

ಎಂದು ಹೇಳುವಲ್ಲಿ ತಿಳಿಸುತ್ತಾರೆ. ದೇಶದಲ್ಲಿಯ ಭ್ರಷ್ಟತೆಗೆ ಅಧಿಕಾರದ ಚುಕ್ಕಣಿ ಹಿಡಿದವರೇ ಕಾರಣರು. ಅಧಿಕಾರವನ್ನು ಜನರ ಸೇವೆಗಾಗಿ ಸದುಪಯೋಗ ಮಾಡಿಕೊಳ್ಳದೆ ಸರ್ವಾಧಿಕಾರಿಯಂತೆ ದುರುಪಯೋಗ ಪಡಿಸಿಕೊಳ್ಳುತ್ತಿರುವುದು ತುಂಬಾ ಕಳವಳಕಾರೀ ಸಂಗತಿ. ಇದಕ್ಕೆ ಹದಗೆಟ್ಟ ರಾಜಕಾರಣವೇ ಕಾರಣ. ಈ ಹದೆಗೆಟ್ಟ ರಾಜಕೀಯದಿಂದ ಹೊರ ಬರುವುದೆಷ್ತು? ದೇಶದ ಒಳಿತಾಗುವುದು ಎಂದು ಕವಿ ಪ್ರಶ್ನಿಸುವ ರೀತಿ ಹೀಗಿದೆ.

" ರಾಜಕಾರಣಿಗಳಲ್ಲಿ ದೇಶರಕ್ಷಕರಲ್ಲಿ
ಮಂತ್ರಿಗಳು ಅಧಿಕಾರಿ ಎಲ್ಲಿ ನೋಡಿದರಲ್ಲಿ
ಧನಲೋಭ ಬೆಳೆಯುತ್ತ ದೇಶವನ್ನು ಮರೆಯಲ್ಲಿ
ನುಕುವಂತಾಯ್ತೇಕೆ? ಹುಲಿಯ ಸಿದ್ಧೇಶ್ವರಾ" (ಯು-೧೨೬) ಪು -೨೧

ಜನರು ಇಂದು ದೇಶ ರಕ್ಷಕರಿಂದ ರಕ್ಷಣೆಯನ್ನು ಮಂತ್ರಿಗಳಿಂದ ಅಭಿವೃದ್ಧಿ ಹಾಗೂ ಸೇವೆಯನ್ನು ಅಧಿಕಾರಿಯಿಂದ ಸವಲತ್ತುಗಳ ವಿನಿಯೋಗವನ್ನು ಬಯಸುತ್ತಾರೆ. ಅದರ ಪ್ರಯೋಜನ ಇಂದು ಯಾರಿಗಾಗುತ್ತಿದೆ ಎಂಬುದು ಚಿಂತನೆಗೆ ತೊಡಗುವ ಮಾತಲ್ಲವೆ?

ಸಮಕಾಲೀನ ರಾಜಕೀಯ ಕ್ಷೇತ್ರದಲ್ಲಿ ಉನ್ನತ ಹುದ್ದೆಯ ಜೊತೆಗೆ ಹೆಸರುವಾಸಿಯಾದ ವ್ಯಕ್ತಿಗಳಾದರೂ ಭ್ರಷ್ಟತೆಯಲ್ಲಿ ತೊಡಗಿದವರನ್ನು ಕವಿಯು ಮುಚ್ಚು ಮರೆಯಿಲ್ಲದೆ ನೇರವಾಗಿ ಖಂಡಿಸುತ್ತಾನೆ.

" ಅನ್ನ ತಿನ್ನುವ ಮನುಜ
ಹುಲ್ಲು ತಿನ್ನುವಂತಾಯ್ತು
ಹುಲ್ಲಿನಾ ಹಗರಣವು
ಬೆಳೆದು ಬಿಟ್ಟಿರುವಾಗ
ಭ್ರಷ್ಟರಾ ದುಷ್ಟತನ
ತೆಗಳದಂತಾಗಿಹುದು

ಪಾಪದಾ ಶಾಪದೊಳು
ಭಾರತಾಂಬೆಯು ಬೆಂದು
ನಿಟ್ಟುಸಿರು ಬಿಡುತಿಹಳು
ಮುಂದಿನಾ ಗತಿಯೇನು ಹುಲಿಯಸಿದ್ದೇಶ್ವರಾ'' (ಶ.ವ.ಶ-೧೦) ಪು -೧೦

ಎಂಬುದು ದೇಶದ ರಾಜಕೀಯದಲ್ಲಿ ಈ ಹಿಂದೆ ನಡೆದ ಹುಲ್ಲಿನ ಹಗರಣವನ್ನು ಎತ್ತಿಕೊಂಡು ಖಂಡಿಸುತಾನೆ. ರಾಷ್ಟ್ರದ ಜನನಾಯಕರು ಇಲ್ಲದ ಆಶೆಗಳನ್ನು ಬಿತ್ತಿ ಆರಿಸಿ ಬಂದು ಮಂತ್ರಿಗಳಾದ ಮೇಲೆ ತಮ್ಮ ಅಧಿಕಾರ ಹಾಗೂ ಸ್ವಲಾಭಕ್ಕಾಗಿ ಎಂಥ ರಾಜಕಾರಣ ಮಾಡುತ್ತಾರೆಂಬುದರ ವಿವರಣೆ, ಪರೋಕ್ಷವಾಗಿ ಇಲ್ಲಿ ಸಿಗುತ್ತದೆ.

" ಮಂತ್ರಿಗಳು ಕಂತ್ರಿಗಳು
ಆಗಿಬಿಟ್ಟಿರುವಾಗ
ಶಾಸಕರು ಸಾಂಸದರು ಭ್ರಷ್ಟರಾಗಿರುವಾಗ
ಸಾಹಿತ್ಯ ಸನ್ಮಾರ್ಗವನ್ನು ತ್ಯಜಿಸಿರುವಾಗ
ಭೋಗ ಸಾಮ್ರಾಜ್ಯದಲಿ
ತ್ಯಾಗ ಸುಟ್ಟಿರುವಾಗ
ದೇಶಭಕ್ತಿಯ ಭಾವ
ನಾಶವಾಗಿರುವಾಗ
ಸ್ವಾರ್ಥ ಸಿದ್ಧಿಯಕಾರ್ಯ
ಸರಳವಾಗಿರುವಾಗ
ಮಾನವನು ದಾನವನ
ರೂಪ ಧರಿಸಿರುವಾಗ
ಹೇಗೆ ಜೀವಿಸಬೇಕು? ಹುಲಿಯಸಿದ್ದೇಶ್ವರಾ'' (ಶ.ವ.ಶ-೭೮)ಪು -೭೮

ಹೊಲಸು ರಾಜಕಾರಣವೇ ಇಂದಿನ ದೇಶದ ದುಸ್ಥಿತಿಗೆ ಕಾರಣ ಎಂಬುದನ್ನು ತಿಳಿಸುವ ಕವಿ ಇದರಿಂದ ಜನರಲ್ಲಿ ಶಾಂತಿ ನೆಮ್ಮದಿ, ಭಂಗವಾಗಿದೆ ಎಂಬುದರ ಚಿತ್ರ ನೀಡುತ್ತಾರೆ.

" ಮಂತ್ರಿಗಳಲ್ಲಿ ಕಂತ್ರಿಗುಣವು
ಬೆಳೆದು ಜನರ ಮನದ ಶಾಂತಿ
ಭಂಗವಾಗಿ ದೇಶ ಪ್ರೇಮ
ನಶಿಸುತಿಹುದು ಪೆದ್ದಜಿಮ್ಮ'' (ಅ.ನ.ಸು.ಪೆ.-೧೨೮)ಪು -೨೨

ಎಂಬಲ್ಲಿ ಇದನ್ನು ಕಾಣಬಹುದು. ದೇಶವನ್ನು ಸ್ವತಂತ್ರಗೊಳಿಸಲು ಅನೇಕ ದೇಶಭಕ್ತರು ತಮ್ಮ ಪ್ರಾಣವನ್ನೇ ಕಳೆದುಕೊಂಡಿದ್ದಾರೆ. ಅದನ್ನು ಮರೆತು ನಮ್ಮ ನಾಯಕರು ಹಣದ ಮೋಹಕ್ಕೆ ಬಿದ್ದು ದೇಶದ ಪ್ರಗತಿಗೆ ಕುಂದುಂಟು ಮಾಡಿದ್ದಾರೆ. ಶಾಸಕರು, ಸಂಸದರು ಕೇವಲ ವೈಯಕ್ತಿಕ ಅಭಿವೃದ್ಧಿ ಹೊಂದಲು ಹವಣಿಸುತ್ತಿರುವುದನ್ನು

"ಶಾಸಕರು ಸಂಸದರು ಶ್ರೀಮಂತರಾಗುತ್ತ
ಶ್ರೀಮಂತರಿನ್ನಷ್ಟು ಶ್ರೀಮಂತರಾಗುತ್ತ
ಬಡತನದ ಬೇಗೆಯಲ್ಲಿ ಬಳಲುತ್ತ ಸಾಯುತ್ತ
ಬಡವರತಿ ಬಡತನದಿ ಹುಲಿಯ ಸಿದ್ದೇಶ್ವರಾ" (ಯು.– ೧೨೩) ಪು –೨೦

ಎಂದು ಮನಗಾಣಿಸುತ್ತಾರೆ. ಇಂದು ರಾಜಕೀಯದ ಬೇರು ಎಲ್ಲ ರಂಗದಲ್ಲೂ ಪಸರಿಸಿಕೊಂಡಿದೆ. ಅದಕ್ಕೆ ಸಾಹಿತ್ಯವೂ ಹೊರತಾಗಿಲ್ಲ ಅದಕ್ಕಾಗಿಯೇ ಇಂದು ಸಾಹಿತ್ಯ ಕ್ಷೇತ್ರದಲ್ಲಿ ರಾಜನೀತಿಯು ಬೆರೆತಿರುವುದರಿಂದ ಸಾಹಿತ್ಯದಲ್ಲಿರಬೇಕಾದ ಸತ್ವ ಕುಂದಿದೆ. ಹೊಸತನದ ಈ ರಾಜಕಾರಣ ಸಾಹಿತಿಗಳನ್ನಷ್ಟೇ ಅಲ್ಲ ಸಾಹಿತ್ಯವನ್ನು ಹಾಳು ಮಾಡುತ್ತಿದೆ.

" ರಾಜನೀತಿಯ ಬೆಳಕು ಸಾಹಿತ್ಯ ಕಂಡಾಗ
ಸಾಹಿತ್ಯದಲ್ಲಿ ರಾಜನೀತಿ ಬೆರೆತಿರುವಾಗ
ಸಾಹಿತ್ಯ ಸಾಹಿತ್ಯ ಆಗುಳಿಯದಿರುವಾಗ
ಹೊಸ ತನದ ಉದಯವೈ ಹುಲಿಯ ಸಿದ್ದೇಶ್ವರಾ" (ಯು– ೧೮೩) ಪು –೨೯

ಇದು ಕವಿಯನ್ನು ಕಾಡುತ್ತಿರುವ ಪ್ರಶ್ನೆ. ದೇಶದ ಹಿತವು ಸಾಹಿತ್ಯದಲ್ಲಿ ಅಡಗಿದಂತೆ, ರಾಜನೀತಿಯು ಸಂಸತ್ತಿನಲ್ಲಿ ಅಡಗಿರುತ್ತದೆ. ಏಕೆಂದರೆ ದೇಶದ ಅಳಿವು –ಉಳಿವನ್ನು ತಿರ್ಮಾನಿಸುವುದು ಸಂಸತ್ತು ಎಂಬುವುದನ್ನು ಮರೆಯಲಾಗದು. ಸಂಸತ್ತಿನ ಪಾತ್ರ ಅಸಾಮಾನ್ಯವಾದುದ್ದು ಅದರ ಪರವೆ ರಾಜನಾಯಕನಾಗಿರಬೇಕು. ಸ್ವಾತಂತ್ರ್ಯ ಪಡೆದು ಐವತ್ತು ವರ್ಷಗಳಾದರೂ ದೇಶ ಪ್ರಗತಿ ಹೊಂದಬೇಕಾದಷ್ಟು ಆಗಿಲ್ಲವೆಂದರೆ ಏಕೆ? ಎಂಬ ಚಿಂತನ ಮಾಡಿಕೊಳ್ಳಬೇಕು. ಈಗಾದರೂ ಮುಂಬರುವ ದಿನಗಳಲ್ಲಿ ಗುರಿ ಮುಟಲಿ ಎಂಬುದನ್ನು ಹೀಗೆ ಚಿಂತಿಸುತ್ತಾರೆ.

"ಐವತ್ತು ವರ್ಷದಲಿ ದೇಶ ಕುಸಿದಿಹ ಗತ್ತು
ಮತ್ತೆ ಸಾಧನೆಗಳಲಿ ಕೀರ್ತಿ ಪಡೆದಿಹ ಸೊತ್ತು
ಭೂತದಲಿ ಬೆಳೆದಿರುವ ವರ್ತಮಾನದ ಗೊತ್ತು
ಗುರಿಕಾಣಬೇಕೆಂದು ಹುಲಿಯ ಸಿದ್ದೇಶ್ವರಾ"
(ಯು.– ೧೯೦) ಪು –೩೦

ಭಾರತವು ಪ್ರಜಾಪ್ರಭುತ್ವ ರಾಷ್ಟ್ರ, ಪ್ರಜೆಗಳೇ ಪ್ರತಿನಿಧಿಗಳು, ಆದರೆ ಇಂದಿನ ಜನರು ಮನುಷ್ಯನ ಮನುಷ್ಯತ್ವಕ್ಕೆ, ದೇಶದ ಘನತೆಗೆ ಬೆಲೆ ಕೊಡದೆ ನೋಟಿಗಾಗಿ ವೋಟು ಕೊಡುವ ಜನರನ್ನು ಎಚ್ಚರಾಗಿರೀ ಎಂದು ಜನ ಸಾಮಾನ್ಯರಿಗಾಗಿ ಹಾಗೂ ದಿನದಲಿತರಿಗೆ ಕವಿ ಜಾಗೃತರಾಗುವಂತೆ ಕರೆ ನೀಡುತ್ತಾರೆ. ಮುಂಬರುವ ನಾಯಕರಲ್ಲಿ ದೇಶ ಸೇವೆಯ ಗುಣವಿರಲಿ ಅಂತಹವರ ಆಯ್ಕೆಯನ್ನು ಬಯಸುತ್ತಾರೆ. ಇದು

"ದೀನ ದಲಿತರು ಈಗ ಎಚ್ಚತ್ತು ಎಚ್ಚೆರಿಸಿ
ದೇಶವನು ಆತ್ಮೀಯ ಭಾವದಲಿ ನೆಲಗೊಳಿಸಿ
ದೇಶ ಸೇವೆಗೆ ಮೀಸಲಿರುವವರನೇ ಗೆಲಿಸಿ
ತರಿಸಿದರೆ ಹಿತವಹುದು ಹುಲಿಯ ಸಿದ್ದೇಶ್ವರಾ"

(ಯು-೨೯೫) ಪು -೪೫

ಆದರೆ ಇಂದು ಬಡವರು ದೀನದಲಿತರು ಕ್ಷಣಿಕ ಸುಖಕ್ಕಾಗಿ ತಮ್ಮ ಹಾಗೂ ದೇಶದ ಹಿತವನ್ನು ಪಣಕೊಡ್ಡುತ್ತಾರೆ. ಚುನಾವಣೆಯಲ್ಲಿ ಪಡೆದ ಸ್ವಲ್ಪ ಪಣ ಹೆಂಡದ ಬಲೆಯಲ್ಲಿ ಬಿದ್ದು ಅಯೋಗ್ಯರನ್ನು ಅರಿಸಿ ಬರುವಂತೆ ಮಾಡಿ ತದನಂತರ ಬುದ್ಧಿಹೀನ ರಾಗುವುದನ್ನು ಅದರಲ್ಲಿ ಶಾಮೀಲಾಗಬಹುದಾದ ಜನರನ್ನು ಎಚ್ಚರಿಸುತ್ತಾರೆ. ಹೀಗಾದಲ್ಲಿ ದೀನದಲಿತರ ಪ್ರಗತಿಯು ಹೇಗೆ ಸಾಧ್ಯ? ಸ್ವಾರ್ಥ ನಾಯಕರಿಂದ ಇದು ಅಸಾಧ್ಯ ತಾನೇ? ಅದನ್ನೇ ಕವಿಯು

"ಸ್ವಾರ್ಥ ಸಾಧನೆಯಲಿ ತೊಡಗಿ
ರಾಜಕಾರಣದಲಿ ಪಳಗಿ
ದಲಿತರನ್ನು ಮೆಟ್ಟನಿಂತ
ಧೂರ್ತರಾರು ಪೆದ್ದಜಿಮ್ಮ" (ಅ.ನ.ಸು.ಪೆ.- ೨೪೨) ಪು -೩೮

ಎನ್ನುತ್ತಾರೆ. ಜಗದ ತುಂಬಾ ಇಂತಹ ಜನರ ಹೆಚ್ಚಾಗಿರುವುದರಿಂದ ಅವರು ಅಟ್ಟಹಾಸದಿಂದ ಮೆರೆಯುತ್ತಿರುವುದ, ದೀನದಲಿತರನ್ನು ತುಳಿದು ತಮ್ಮ ತಮ್ಮ ಬಾಳ ಸಾಗಿಸುತ್ತಿದ್ದಾರೆ. ಆದಷ್ಟು ಬೇಗ ದೀನದಲಿತರು, ಹಿಂದುಳಿದ ವರ್ಗದವರು, ಬಡಜನರು ಎಚ್ಚರಗೊಳ್ಳಬೇಕು. ಎಚ್ಚರಾಗದೇ ರಾಜಕೀಯದಲ್ಲಿಯ ಹೊಲಸು ಹೋಗಲಾಡಿಸಲು ಸಾಧ್ಯವಿಲ್ಲ. ರಾಜಕಾರಣಿಗಳು ತಾನಾಗಿಯೇ ರಾಜಕಾರಣ ತೊರೆಯುವುದಿಲ್ಲ . ಅದಕ್ಕಾಗಿ ಜನ ಎಚ್ಚೆತ್ತುಗೊಳ್ಳಬೇಕೆಂದು ಕವಿ ಹೇಳುತ್ತಾನೆ. ಶಾಂತಿ, ನೆಮ್ಮದಿ ಸಿಗಬೇಕಾದರೆ ಕ್ರಾಂತಿ ಮಾಡಬೇಕು, ಅದು ಘೋರ ಕ್ರಾಂತಿ ಎನ್ನುವುದನ್ನು

"ಸ್ವಾರ್ಥ ಬೆಳೆದು ಶಾಸಕರಲಿ
ಕಂತ್ರಿ ಮಂತ್ರಿ ದ್ರೋಹಿಗಳಲಿ
ಜನತೆ ದೀನ ದಲಿತ ರಾಗಿ
ಕ್ರಾಂತಿ ಬೇಕು" ಎಂಬುದಾಗಿ

(ಐ.ಅ.ಪೌ. – ೪೪) ಪು –೬೩

ಎಂಬಲ್ಲಿ, ಹಾಗೂ
"ಕಾಲ ಬೇಗ ಬರುತಲಿಹುದು
ಸೊಳ್ಳು ಹಾರಿ ಗಟ್ಟಿ ಉಳಿದು
ನೆಟ್ಟಗಿರುವ ದಾರಿಯಲ್ಲಿ
ಕ್ರಾಂತಿಯಿಂದ ಶಾಂತಿ ಬೆಳೆದು"

(ಐ.ಅ.ಪೌ.–೪೪) ಪು –೬೩

ಎಂದು ಹೇಳುವಲ್ಲಿ ಸೂಚಿಸುತ್ತಾರೆ. ರಾಜಕಾರಣದಲ್ಲಿ ಪಳಗುವವರು ರಾಜನೀತಿಯನ್ನು ನಿಜವಾದ ಅರ್ಥದಲ್ಲಿ ಅರಿಯಬೇಕು. ಧರ್ಮದ ಹೆಸರಿನಲ್ಲಿ ನಡೆಯುವುದು ರಾಜಕಾರಣಿಗಳ ಕಾರ್ಯವಾಗಬಾರದು . ಧರ್ಮ ಮಾರ್ಗದಲ್ಲಿ ಸ್ವತಃ ಸಾಗಬೇಕು.

"ಕುರುಕ್ಷೇತ್ರದಾ ಯುದ್ಧ ಭೂಮಿಯಲಿ
ಶ್ರೀ ಕೃಷ್ಣನ ತಂತ್ರವ ನೋಡು
ಕೌರವರನು ಕೊಲ್ಲುವ ಪರಿ ನೋಡು
ಪಾಂಡವರನು ಗೆಲಿಸುವ ಪರಿ ನೋಡು"

(ಐ.ಅ.ಪೌ. – ೩೧) ಪು –೪೮

ಎನ್ನುವಲ್ಲಿ ನಿಜ ರಾಜಕೀಯದ ಅರಿವು ಮೂಡಿಸುತ್ತಾರೆ. ಇಲ್ಲಿ ಕೃಷ್ಣನ ತಂತ್ರವಾದ ದುಷ್ಟತನದ ಸಂಹಾರ, ಶಿಷ್ಟ ಸಂರಕ್ಷಣೆಯ ಗುರಿ ಇಂದಿನ ರಾಜಕಾರಣದಲ್ಲಿ ಹಾಸುಹೊಕ್ಕಾಗಲಿ ಎಂಬುದು ಕವಿ ಅನಿಸಿಕೆ. ಈ ಧರ್ಮವನ್ನು ಇಂದಿನ ರಾಜಕಾರಣಿಗಳು ದುರುಪಯೋಗಪಡಿಸಿಕೊಂಡು ಬೇರೆ ರೀತಿಯಿಂದ ಸ್ವ ಹಿತಕ್ಕಾಗಿ ಬಳಸಿಕೊಂಡಿರುವ ದುರಂತ ಕವಿಯ ಅಭಿವ್ಯಕ್ತಿಯಲ್ಲಿ ಕಾಣಸಿಗುತ್ತದೆ. ಧರ್ಮದ ಗೋಡೆಯ ಕಟ್ಟಿ ಸಮಾಜದಲ್ಲಿ ಜಾತಿ ಜಾತಿಗಳಲ್ಲಿ ಭೇದ, ದೀನದಲಿತರ ಶೋಷಣೆ, ಹಿಂದುಳಿದ ವರ್ಗದವರ ನಿರ್ಲಕ್ಷ್ಯ, ರಾಜಕೀಯ ಅಟ್ಟ ಹಾಸದ ಚಿತ್ರವನ್ನು ಇವರು ಕಣ್ಣಕಟ್ಟುವಂತೆ ನಿರೂಪಿಸಿದ್ದಾರೆ.

ಒಟ್ಟಿನಲ್ಲಿ ಖೂಬಾರ ಸಾಹಿತ್ಯದಲ್ಲಿಯ ರಾಜಕೀಯದ ಚಿಂತನೆಗಳು ಅತ್ಯಂತ ವಾಸ್ತವಿಕ ಸಂಗತಿಗಳಾಗಿದ್ದು ಇಂದಿನ ನಮ್ಮ ರಾಜಕೀಯ ಬದುಕನ್ನು ದಿಗ್ದರ್ಶಿಸುತ್ತವೆ. ದೇಶದ ಸ್ವಾತಂತ್ರ್ಯದ ಪೂರ್ವದಲ್ಲಿ ನಮ್ಮಲ್ಲಿಯ ಎಲ್ಲಾ ದುರಂತಗಳಿಗೆ ಪಾಶ್ಚಾತ್ಯರ ಕಡೆಗೆ ಬೊಟ್ಟು ತೋರಿಸಿ ತಮ್ಮ ವೈಯಕ್ತಿಕ ಹೊಣೆಗಾರಿಕೆಯಿಂದ ಮುಕ್ತರಾಗುತ್ತಿದ್ದ ಕಾಲ ಈಗಿಲ್ಲ. ಈಗ ನಾವು ಸ್ವತಂತ್ರರು ತಾನೇ? ಹೀಗಿರುವಾಗ ಈಗ ಹೊಸ ಹಸಿರು ಚಿಗುರುತ್ತದೆಂಬ ರಾಮ ರಾಜ್ಯದ ಕನಸು ಕಾಣುತ್ತಾ ಅದರ ಆದರ್ಶ ಮೌಲ್ಯಗಳಿಗಾಗಿ ಹೋರಾಟ ನಡೆಸಲಾಗುತ್ತಿದೆ. ಆದರೆ ಈ ಆದರ್ಶಗಳು ನಮ್ಮ ಕಣ್ಮುಂದೆಯೇ ಕಣ್ಮರೆಯಾಗುತ್ತಿರುವುದಕ್ಕೆ ಇಂದಿನ ಸ್ವಾರ್ಥ ರಾಜಕಾರಣವೇ ಕಾರಣವೆಂಬುದನ್ನು ಮರೆಮಾಚಲಾಗದು. ಈ ಕ್ಷೇತ್ರದಲ್ಲಿ ತುಂಬಿರುವ ಸ್ವಾರ್ಥ, ಅನ್ಯಾಯ, ಅಸಮಾನತೆ, ಅಧಿಕಾರ ದಾಹ, ಗುಂಡಾಗಿರಿ ದಿನೇ ದಿನೇ ಹೆಚ್ಚಾಗಿರುವುದು ರಾಜಕೀಯದಲ್ಲಿ ಕೆಟ್ಟ ವಾತಾವರಣವನ್ನು ನಿರ್ಮಿಸಿ ಜನಸಾಮಾನ್ಯರ ಬದುಕನ್ನು ಇಂದು ಚಿಂತನೆಗೊಳ್ಳಪಡಿಸಿವೆ. ಜನ ಸಾಮಾನ್ಯರ ಸ್ಥಿತಿಗತಿಯನ್ನು ಯಾರೂ ಕೇಳದಂತಾಗಿದೆ ಎಂಬುದನ್ನು ಕವಿ ಆಲೋಚಿಸುತ್ತಾರೆ. ಇಂತಹ ರಾಜಕೀಯ ಪರಿಸರ ನಿರ್ಮಾಣಕ್ಕೆ ಬೇರೆ ಯಾರೂ ಹೊಣೆಗಾರರಲ್ಲ. ನಾವೆಲ್ಲರೂ ಕಾರಣ ಎಂಬುದನ್ನು ಕವಿ ಸ್ಪಷ್ಟಪಡಿಸುತ್ತಾರೆ. ನಮ್ಮ ಧೋರಣೆಗಳಲ್ಲಿರುವ ದ್ವಂದ್ವಗಳು, ನಮ್ಮೊಳಗಿರುವ ಅಪಮೌಲ್ಯಗಳು, ಪ್ರಸ್ತುತ ರಾಜಕೀಯ ವಾತಾವರಣ ಕಲುಷಿತವಾಗಲು ಕಾರಣಗಳಾಗಿದ್ದು ಇದರ ಪರಿಹಾರ ಕಾರಣಗಳ ನಿರ್ಮೂಲವನ್ನು ನಾಶಮಾಡುವುದಾಗಿದೆ. ಆ ನಿಟ್ಟಿನಲ್ಲಿ ಚಿಂತನೆಗೆ ಹಚ್ಚುವ ಖೂಬಾ ಅವರ ಸಾಹಿತ್ಯ ರಾಜಕೀಯದ ಹಲವು ಸಂದರ್ಭಗಳನ್ನು ನಮ್ಮ ಕಣ್ಣೆದುರು ತೆರೆದಿಡುತ್ತದೆ.

ಸಂಸ್ಕೃತಿ ನಮ್ಮ ಜೀವನದ ವಿಧಾನಗಳಾದ ಆಚಾರ-ವಿಚಾರ, ಸಾಹಿತ್ಯ ಕಲೆ, ಭಾವ-ಭಾಷೆ, ರೀತಿ-ನೀತಿ, ಆಚರಣೆ-ಸಂಪ್ರದಾಯ, ಉಡಿಗೆ-ತೊಡಿಗೆ ಧರ್ಮ ಹಾಗೂ ಸಂಗೀತ ಇವೆಲ್ಲವುಗಳಿಂದ ಕೂಡಿರುವ ಸಮಗ್ರ ಮೂರ್ತ ರೂಪವೇ ಸಂಸ್ಕೃತಿ.

"ಸಂಸ್ಕೃತಿ ಎನ್ನುವುದು ಕಾವ್ಯಕ್ಕೆ ಸಮಾನವಾದುದು, ಅದು ಕಾವ್ಯವನ್ನು ಅನುಸರಿಸುವ ಧರ್ಮವನ್ನು ಅನುಸರಿಸುವುದು. ಒಂದು ಜೀವನದ ಭಾವನೆ ಮತ್ತು ಅದಕ್ಕನುಗುಣವಾಗಿ ಮನುಷ್ಯ ಸ್ವಭಾವದ ಸರ್ವೋಮುಖವಾದ ಗುಣ ಸಂಪಾದನೆ ಒಂದು ಕಾವ್ಯದ ಪ್ರಧಾನ ತತ್ವ ಸಂಸ್ಕೃತಿಯೂ ಅದೇ"[೧] ಸಂಸ್ಕೃತಿಯು ಮಾನವನು ತನ್ನ ಸಮಾಜದಿಂದ ಪಡೆಯುವ ಸಾಮಾಜಿಕ ಪರಂಪರೆಯಾಗಿದೆ.

ಸಂಸ್ಕೃತಿ ಎಂಬ ಪದ ಇತ್ತೀಚೆಗೆ ಬಂದಿದೆ. 'ಸಂಸ್ಕೃತಿ' ಎಂಬ ಪದವನ್ನು ಇಂಗ್ಲೀಷಿನ 'Culture' ಎಂಬುದಕ್ಕೆ ಸಂವಾದಿ ಪದವಾಗಿ ಬಳಸಲಾಗುತ್ತಿದೆ. ಈ ಮಾತು ನಮಗೆ ಹೊಸತು ಆದರೆ ಅದರ ಹಿಂದಿರುವ ಅರ್ಥ ಹೊಸದಲ್ಲ, 'Culture' ಎಂಬುವುದರ ಮೂಲ ಪದ 'Cult' ಅಥವಾ 'Cults' ಎಂಬುದು 'Cult'ಎಂದರೆ ಗೌರವಿಸು, ಆರಾಧಿಸು, ಸೇವೆ ಮಾಡು ಮೊದಲಾದ ಅರ್ಥವನ್ನು ಒಂದು ಕಡೆ ಪಡೆದರೆ, ಇನ್ನೊಂದು ಕಡೆ 'ಭೂದೇವಿಯ ಆರಾಧನೆ' ಎಂದರೆ 'ಕೃಷಿ' ಎಂಬ ಅರ್ಥವನ್ನು ಪಡೆಯಿತು. ಈ ಎರಡನೇಯ ಅರ್ಥದಿಂದಲೇ 'Agriculture' ಎಂಬ ಶಬ್ದ ಬಂದಿದೆ. 'Culture' ಎಂಬುದು ಒಂದು ಬಗೆಯ ವ್ಯವಸಾಯವೇ ಆಗಿದೆ. ಭೂಮಿಯನ್ನು ಎತ್ತಿ, ಬಿತ್ತಿ, ಗೊಬ್ಬರ ಹಾಕಿ ಹಸನು ಮಾಡುವಂತದ್ದು, ಮನುಷ್ಯನಲ್ಲಿರುವ ವಿಶೇಷವಾದ ಶಕ್ತಿಗಳು ಮೊಳಕೆಯೊಡೆದು ಬೆಳೆಯುವುದಕ್ಕಾಗಿ ಮಾಡಬೇಕಾದ ಅಂತರಂಗದ ವ್ಯವಸಾಯವೇ ಆಗಿದೆ. ಹೀಗಾಗಿ 'ಸಂಸ್ಕೃತಿ' ಎಂದರೆ ವ್ಯಕ್ತಿಗತ ಎಂಬ ಅಭಿಪ್ರಾಯ ಎಂಬುದು ಸುಸ್ಪಷ್ಟ.



ಮನುಷ್ಯ ಸಾಂಸ್ಕೃತಿಕ ಜೀವಿ. ವ್ಯಕ್ತಿಯು ಸಾಂಸ್ಕೃತಿಕ ಜೀವನ ಉತ್ತಮ ಪರಿಸರ ಒಂದನ್ನು ರೂಪಿಸಿದಂತೆ ಆ ಪರಿಸರವು ಹಲವು ವ್ಯಕ್ತಿಗಳ ಸಾಂಸ್ಕೃತಿಕ ಬದುಕನ್ನು ಕಟ್ಟುತ್ತದೆ. ಅಂಥ ಸಾಂಸ್ಕೃತಿಕ ಬದುಕನ್ನು ದಾಖಲಿಸುವ ಪರಿಸರಗಳಲ್ಲಿ ಸಾಹಿತ್ಯವೂ ಒಂದು. ಸಾಹಿತ್ಯವೂ ಒಂದರ್ಥದಲ್ಲಿ ಸಾಂಸ್ಕೃತಿಕ ಚಿಂತನೆಗಳ ದಾಖಲೆಯಾಗಿ ನಿಲ್ಲುತ್ತದೆ. ಅದರಲ್ಲೂ ಉತ್ತಮ ಸಾಹಿತ್ಯ ಕೃತಿಯು ಇಂತಹ ಬದುಕನ್ನು ಕಟ್ಟಿಕೊಡುವ ಸುಂದರ ಕಲಾಕೃತಿಯಾಗಿ ನಿಲ್ಲುತ್ತದೆ. ಮನುಷ್ಯನ ನಡೆ-ನುಡಿ, ರೀತಿ-ನೀತಿ, ಆಚಾರ-ವಿಚಾರ, ಸುಖ-ದುಃಖ, ಬೇಕು-ಬೇಡಗಳಿಂದ ಪ್ರಾರಂಭಗೊಳ್ಳುವ ಈ ಬದುಕು ಕುಟುಂಬ, ಸಮಾಜ, ರಾಜ್ಯ, ರಾಷ್ಟ್ರ ಮುಂತಾಗಿ ವಿಶಾಲ-

ಅಡಿಟಿಪ್ಪಣಿ:

೧. ಸಂಸ್ಕೃತಿ ಡಿ.ವಿ.ಜಿ. ಪ್ರಕಾಶಕರು ಕಾವ್ಯಾಲಯ-ಮೈಸೂರು-೧೯೫೭ ಪುಟ-೨೦,೨೧

ವಿಶ್ವವಾಗಿ ಬೆಳೆದು ನಿಲ್ಲುತ್ತದೆ. ಧರ್ಮ, ಕಲೆ, ಸಾಹಿತ್ಯ ಮುಂತಾದವುಗಳು ಇದರಲ್ಲಿ ಸಮ್ಮಿಲಿನಗೊಂಡು ಇವು ಮನುಷ್ಯನ ಸಾಂಸ್ಕೃತಿಕ ಜೀವನಕ್ಕೆ ಸೃಜನಾತ್ಮಕ ಸೃಷ್ಟಿಗಳಾಗುತ್ತವೆ. ಇದನ್ನೇ ವಿದ್ವಾಂಸರು "ಮಾನವ ಜೀವನದ ಅಂತರಂಗ ಬಹಿರಂಗಗಳನ್ನು ವ್ಯಾಪಿಸಿಕೊಂಡಿರುವ ವ್ಯಷ್ಟಿ ಸಮಷ್ಟಿಗಳನ್ನು ಸರ್ವಸಾಧಾರಣವಾದ ಮಾನವೀಯ ಮೌಲ್ಯಗಳನ್ನು ಒಳಗೊಂಡಿರುವ ಸತ್ಯ, ಸೌಂದರ್ಯ, ಶಿವ ತತ್ವಗಳನ್ನು ಅವಿಷ್ಕಾರಗೊಳಿಸುವಂತಹ ಬದುಕೆ ಸಾಂಸ್ಕೃತಿಕ ಜೀವನ ಇದು ಖಂಡವಾದುದಲ್ಲ, ಅಖಂಡವಾದದ್ದು"[೪] ಎಂದು ಹೇಳುತ್ತಾರೆ.

ವಿಶ್ವ ಪರಂಪರೆಯಲ್ಲಿ ಭಾರತದ ಸಂಸ್ಕೃತಿ ಉನ್ನತವಾದುದು. ಆದರೆ ಇಂದು ಈ ದಿವ್ಯ ಪರಂಪರೆಯು ಮರೆಯಾಗುತ್ತಿರುವುದನ್ನು ಕವಿಯು ಗಮನಿಸುತ್ತಾನೆ . ನೀತಿ, ಧರ್ಮ, ಮಾನವೀಯತೆ ಎಲ್ಲವನ್ನೂ ಮರೆತ ಜೀವನವು ಗೊಂದಲಮಯವಾಗಿ ಸಾಗುತ್ತಿದೆ. ಅದಕ್ಕಾಗಿ ಯಾರು ಹೇಗೆ ಇರಲಿ ತನ್ನಂತೆ ಇತರರನ್ನು ತಿಳಿದು ಬಾಳಲು ಕರೆ ನೀಡುವ ಕವಿಯು ಒಂದು ಸಂಸ್ಕೃತಿ ಪಾಲನೆಗೆ ಕರೆ ನೀಡುತ್ತಾನೆ.

"ಯಾರಾದರೇನಂತೆ ಹೇಗಿದ್ದರೇನಂತೆ
ತನ್ನಂತೆ ಪರರನ್ನು ತಿಳಿದು ಬಾಳುವ ಮತಿಯು
ಮಾನವನು ಕಳಕೊಂಡು ದಾನವನೆ ಆಗಿಹನು
ಮಾನವನ ಮಾನವತೆ ಮಟಮಾಯವಾಗುತಿದೆ
ಕಂಡು ಕಾಣದ ಹಾಗೆ ಮೌನಿಯಾಗಿಹ ನಿನ್ನ
ಮಾಟ ತಿಳಿಯದು ನನಗೆ ಹುಲಿಯಸಿದ್ದೇಶ್ವರಾ"

(ಶ.ವ.ಶ.-೧೪) ಪು -೧೪

ಮಾನವನ ಮಾನವತೆ ಉಳಿಯಬೇಕಾಗಿದೆ ಎಂಬುದು ಇಲ್ಲಿ ಹೇಳಿಕೆ. ದಾನವತೆ ಬಿಟ್ಟು ಇಂತಹ ಭಾವನೆಯನ್ನು ಪ್ರತಿಯೊಬ್ಬ ಜನರು ಮೈಗೂಡಿಸಿಕೊಂಡು ಆಯಾ ಕುಟುಂಬ, ಕುಟುಂಬದಿಂದ ಸಮಾಜವೂ, ಸಮಾಜದಿಂದ ರಾಷ್ಟ್ರವು ಮತ್ತೆ ಸಂಸ್ಕೃತಿಯ ಹಿರಿಮೆಯನ್ನು ತೋರಿಸುವಲ್ಲಿ ಮುಂದಾಗಬೇಕು. ಅಲ್ಲದೇ ಪುರಾತನ ಕಾಲದಿಂದ ಪೂರ್ವಜರು ಕಾಪಾಡಿಕೊಂಡು ಬಂದಿರುವುದನ್ನು ಉಳಿಸಿಕೊಳ್ಳಬೇಕು. ಅದು ನಮ್ಮ ಆದ್ಯ ಕರ್ತವ್ಯವೆಂಬುದನ್ನು ಇದು ತಿಳಿಸುತ್ತದೆ.

ಇಂದಿನ ನಮ್ಮ ಸಾಂಸ್ಕೃತಿಯ ಬದುಕಿನ ಬದಲಾವಣೆಗೆ ಹಲವು ಕಾರಣಗಳಿವೆ. ಬ್ರಿಟಿಷರ ಆಳ್ವಿಕೆ, ಅನ್ಯ ಭಾಷಾ ಪ್ರಭಾವ, ಅನ್ಯ ಸಂಸ್ಕೃತಿಯ ದಾಳಿ, ದೂರದರ್ಶನದ ಜಾಹಿರಾತುಗಳು, ನಮ್ಮವರು ಪರದೇಶಕ್ಕೆ ಮಾರುಹೋದದ್ದು ಮುಂತಾದವುಗಳನ್ನು ಇಲ್ಲಿ ಹೆಸರಿಸಬಹುದು. ಅವುಗಳನ್ನು ಕುರಿತು ಕವಿಯು

---

**ಅಡಿಟಿಪ್ಪಣಿ:**

೪. ಕಾಪಸೆ ಜಿ.ಎಸ್. : ಮಧುರಚೆನ್ನ ಜೀವನ ಹಾಗೂ ಕೃತಿಗಳ ಸಮೀಕ್ಷೆ-೧೯೭೬ ಪುಟ-೧೫೬

"ಬುದ್ಧಿ ಹೆಚ್ಚಿದಂತೆ ಮನುಜ
ಹೃದಯ ಹೀನನಾಗಿ ಬಿಡುತ
ಸಾಗುತಿರುವ ಮಾರ್ಗದತ್ತ
ಹೋಗದಿರಲಿ ಪೆದ್ದಜಿಮ್ಮ" (ಅ.ನೆ.ಸು.ಪೆ.-೨೫೬ ) ಪು -೪೦

"ಭಾರತೀಯರಲಿಂದು
ಭಾರತಿಯ ಸಂಸ್ಕೃತಿಯ
ನಶಿಸಿ ಹೋಗುತ್ತಿಹದು
ಪಾಶ್ಚಾತ್ಯರಾ ಮತಿಯು
ಎಷ್ಟು ದಿನಗಳ ವರೆಗೆ
ಉಳಿಯುವುದು ಈ ಸ್ಥಿತಿಯು
ಸರಸತಿಯ ಸ್ಮರಣೆಯದು
ಬೇಡನ್ನುತಿರುವಂಥ
ಮಕ್ಕಳನು ಭಾರತವು
ಪಡೆಯುವಂತಾಯ್ತಲ್ಲ
ಎಂಬ ಸ್ಥಿತಿ ಗತಿ ನೋವು
ಕೊಡುತಿರುವ ತಾಪವನು
ಭಾರತಾಂಬೆಯ ಹೇಗೆ
ಸಹಿಸಿಕೊಳ್ಳುತ್ತಿಹಳು
ವಿನಾಶ ಕಾಲೇ ವಿಪರೀತ ಬುದ್ಧಿ
ಎನ್ನುವಂತಾಯತ್ತಲ್ಲ ಹುಲಿಯಸಿದ್ದೇಶ್ವರಾ "
(ಶ.ವ.ಶ.-೪೯) ಪು -೪೯

ಎಂದು ಹೇಳುತ್ತಿರುವಲ್ಲಿ ಅದರ ವಿವರ ಕಾಣಸಿಗುತ್ತದೆ. ಮನುಷ್ಯ ಸ್ವಭಾವಕ್ಕೆ ಸೌಂದರ್ಯವನ್ನು ಬೆಲೆಯನ್ನೂ ಕೊಡುವ ಎಲ್ಲ ಶಕ್ತಿಗಳ ಸುಸಂಗತ ವಿಕಾಸವನ್ನು ಸಂಸ್ಕೃತಿ ಎನ್ನಲಾಗುವುದು ಆದರೆ ದುಃಖದ ಸಂಗತಿಯೆಂದರೆ ಎಲ್ಲ ಕ್ಷೇತ್ರವು ಭೌತಿಕದ ಬೆಡಗಿಗೆ ಮಾರು ಹೋಗಿದೆ. ಇದಕ್ಕೆ ಸಾಹಿತ್ಯವೂ ಹೊರತಾಗಿಲ್ಲ. ಇಂದು ಬುದ್ಧಿಯೂ ಬೆಳೆದಂತೆಲ್ಲ ಮನುಷ್ಯರಲ್ಲಿರುವ ಮುಖ್ಯವಾದ ಭಾವದಲ್ಲಿರುವ ರಸವು ಕಣ್ಮರೆಯಾಗುತ್ತಿದೆ. ಹೀಗೆ ಭಾವಕ್ಕೆ ಕುಂದುಂಟು ಆದ ಮೇಲೆ ಮುಂಬರುವ ದಿನಗಳು ಹೇಗೆ ಇರಬಹುದು ಎಂಬುದು ಕವಿಯನ್ನು ಕಾಡುವ ಪ್ರಶ್ನೆ.

“ ಸಾಹಿತ್ಯ ಸೊರಗುತಿದೆ ಸಂತೃಪ್ತವಾಗುತಿದೆ
ಭೌತಿಕದ ಭೌಮತೆಗೆ ಶರಣಾಗಿ ಬಾಗುತಿದೆ
ಬುದ್ಧಿ ಬೆಳೆಯುತ ಭಾವ ರಸ ಸತು ಕೊಳೆಯುತಿದೆ
ಮುಂದಿನ ಗತಿಯೇನು? ಹುಲಿಯ ಸಿದ್ದೇಶ್ವರಾ” (ಯು–೧೮೩) ಪು –೨೯
ಎಂದು ಕೇಳುತ್ತಿರುವಲ್ಲಿ ಇದನ್ನು ಅರಿಯಬಹುದು.

ಶತಮಾನ ಉರುಳಿದಂತೆ ಅದರ ಜೊತೆ ದೇಶಭಕ್ತಿಯ ಪ್ರೇಮ, ಈಶಭಕ್ತಿಯ ಶ್ರದ್ಧೆ, ನಂಬಿಕೆ ಉರುಳುತ್ತಿದಂತೆ ಭಾಸವಾಗುತ್ತಿದೆ. ಸಂಸಾರದ ಸೂತ್ರವು ಹರಿದು ತುಂಡು ತುಂಡಾಗುತ್ತಿದೆ. ಇಂದಿನ ಬದುಕು ದುಡ್ಡಿನ ಮೊಹದಲ್ಲಿ ಸಿಲುಕಿ ಸಿರಿವಂತರು ನಗ್ನ ನೃತ್ಯ ಮಾಡುತ್ತಿದ್ದಾರೆ. ಬಡವನ ಪಾಡು ಅತಂತ್ರದ ಜಾಡಿನಲ್ಲಿ ಸಿಲುಕಿ ಹೊರಬಂದಂತಾಗಿದೆ. ದಾರಿ ತಪ್ಪಿ ಒದ್ದಾಡುವ ಜನರ ಸಂಖ್ಯೆಯ ಹೆಚ್ಚಾಗಿದೆ.

“ಶತಮಾನ ಗತಿಸಿ ಹೊಸ ಶತಮಾನ ಬರುತಿಹುದು
ಧನಲೋಭದಲಿ ನಗ್ನ ನೃತ್ಯ ನಡೆತ್ತಿಹುದು
ಧನಹಿನನಿಗೆ ಬದುಕು ಸಾಕು ಎನಿಸುತ್ತಿಹುದು
ದಾರಿ ಕಾಣದ ಬದುಕು ಹುಲಿಯ ಸಿದ್ದೇಶ್ವರಾ” (ಯು–೬೬) ಪು –೧೨

ಹಣದ ಹಿಂದೆ ಬೆನ್ನು ಬಿದ್ದಿರುವ ಇಂದಿನ ಬದುಕು ಲೋಭಿ ಸಂಸ್ಕೃತಿಯನ್ನು ಅನುಸರಿಸುವ ಚಿತ್ರ ಇಲ್ಲಿದೆ. ಅವರ ಬದುಕನ್ನು ಸನ್ಮಾರ್ಗದಲ್ಲಿ ನಡೆಸು. ಪ್ರತಿಯೊಬ್ಬರ ಮಾನ–ಮರ್ಯಾದೆ ಹೆಚ್ಚಿಸು. ನಾವೆಲ್ಲರೂ ಒಂದೇ ಎಂಬ ಸಮಾನ ಮನೋಭಾವನೆ ಬೆಳೆಸು ಸನ್ಮಾರ್ಗ ತೋರಿಸು ಎಂದು ನಿವೇದಿಸುವಲ್ಲಿ ಇಂದಿನ ವಾಸ್ತವಿಕ ಚಿತ್ರ ಕಾಣುತ್ತದೆ. ಜಗದಲ್ಲಿರುವ ಎಲ್ಲ ಬಡವರು ಸುಖದಿಂದ ಬಾಳಲಿಯಂಬುದೇ ಇವರ ಮುಖ್ಯವಾದ ಧ್ಯೇಯವಾಗಿದ್ದು ಕವಿಯು ಹಳೆಯದ್ದೆಲ್ಲಾ ಹೋದರೂ, ಹೊಸದರಲ್ಲಿ ಕತ್ತಲೆಯು ಹೋಗಿ ಬೆಳಕು ಬಂದಂತೆ. ಈ ಹೊಸ ಬೆಳಕಿನ ಬರುವಿಕೆಯಾಗಿ ಕಾಯುತ್ತಾನೆ. ಅಲ್ಲದೆ ಇಂದು ಎಲ್ಲೆಡೆಯೂ ಮೋಸ, ವಂಚನೆ ಕಪಟಗಳಿಂದ ಕೂಡಿದ ಜನರೊಂದಿಗೆ ಜೀವಿಸಬೇಕಾಗಿದೆ. ಅಲ್ಲದೇ ಅವೆಲ್ಲದುರಿಂದ ಉಳಿದುಕೊಂಡು ಬಾಳಬೇಕಾದರೆ ಕಡ್ಡಾಯವಾಗಿ ಬೌದ್ಧಿಕ ಬೆಳವಣಿಗೆ ಅತ್ಯಾಗತ್ಯ. ಹಾಗಾಗಿ ಎಲ್ಲರೂ ಅಕ್ಷರ ಜ್ಞಾನ ಹೊಂದಿದಲ್ಲಿ ಮಾತ್ರ ಜೀವನವೂ ಸಾರ್ಥಕತೆಯತ್ತ ಕೊಂಡಯುತ್ತದೆ. ಇಲ್ಲದಿದ್ದರೆ ಅಕ್ಷರ ಜ್ಞಾನವಿಲ್ಲದವನ ಬಾಳು ಮೂಢನಂಬಿಕೆಯ ರಾಕ್ಷಸನಾಗುವುದನ್ನು ಅವರು ತಿಳಿಸುತ್ತಾರೆ.

“ಅಕ್ಷರ ಕಲಿಯಿರಿ ಸಾಕ್ಷರರಾಗಿರಿ
ಎಚ್ಚರ ಗೊಳುತ ಜ್ಞಾನಿಗಳಾಗಿರಿ
ಮೂಢನಂಬಿಕೆಯ ರಕ್ಕಸನನ್ನು
ಸಂವಹರಿಸುವ ಚೈತನ್ಯವ ಪಡೆಯಿರಿ ”
(ಐ.ಅ.ಪೌ–೪೧) ಪು –೬೦

ಅಜ್ಞಾನದ ತೊಲಗುವಿಕೆಗೆ ಅಕ್ಷರ ಸಂಸ್ಕೃತಿ ದಾರಿ ದೀಪವೆಂಬುದು ಇಲ್ಲಿಯ ಹೇಳಿಕೆ. ಈ ಅಕ್ಷರ ಸಂಸ್ಕೃತಿಯು ಇಂದಿನ ಸಾಕ್ಷರರನ್ನು ನಿರ್ಮಿಸುತ್ತಿದೆಯೇ ಹೊರತು ಸುಜ್ಞಾನಿಗಳನಲ್ಲ, ಕಲಿತವರೆಲ್ಲ, ಜೀವನದಲ್ಲಿ ಜಾಣರಾಗುತ್ತಿಲ್ಲ. ಇಲ್ಲಿ ನಡೆಯುವ ಅನೇಕ ಅನಾಹುತಗಳಿಗೆ ಇಂದಿನ ಕಲಿತವರೇ ಕಾರಣರಾಗುತ್ತಿರುವ ಚಿಂತೆ ಕವಿಯನ್ನು ಕಾಡುತ್ತಿದೆ. ಸಮಾಜದಲ್ಲಿ ಅನೇಕ ಅನಾಹುತಗಳು ನಡೆಯಲು ಈ ವಿದ್ಯಾವಂತರೇ ಕಾರಣರಾಗಿರುವುದರಿಂದ ಕವಿಯು ಆತಂಕ ವ್ಯಕ್ತಪಡಿಸುತ್ತಾನೆ. ಇವರು ತಿಳಿದೋ ತಿಳಿಯದೆಯೋ ತಪ್ಪು ದಾರಿಯನ್ನು ತುಳಿಯುತ್ತಿರುವುದು ದುಃಖದ ವಿಷಯವಾಗಿದೆ. ದೊಡ್ಡ ಪದವಿ ಪಡೆದು ಸಮಾಜಕ್ಕೆ ಸರಿಯಾದ ದಾರಿ ತೋರಬೇಕಾದವರೇ ಅಡ್ಡ ದಾರಿ ಹಿಡಿದರೆ ಮುಂದಿನ ಗತಿಯೇನು? ಎಂಬ ಸಂದೇಹ ಕಾಡಿ ಅವರಲ್ಲಿರಬೇಕಾದ ಸುಸಂಸ್ಕೃತತೆ ಎಲ್ಲಿ ಎಂಬುದನ್ನು

"ದೊಡ್ಡ ದೊಡ್ಡ ಪದವಿ ಪಡೆದು
ದಡ್ಡರಂತೆ ವರ್ತಿಸುತ್ತ
ಅಡ್ಡ ಹಾದಿ ಹಿಡಿದು ನಡೆವ
ಜನರೆ ಹೆಚ್ಚು ಪೆದ್ದ ಜಿಮ್ಮ"

(ಅ.ನೆ.ಸು.ಪೆ.-೧೩೦) ಪು -೨೨

ಎಂದು ಕೇಳುತ್ತಾರೆ.

ಪಥಿಕರಿಗೆ ದಾರಿಗಳು ಎರಡುಂಟು, ಒಂದು ಒಳ್ಳೆಯದು ಇನ್ನೊಂದು ಕೆಟ್ಟದ್ದು. ಈ ದಾರಿಗಳನ್ನು ತಮ್ಮ ಇಚ್ಛೆ ಅನುಗುಣವಾಗಿ ಆಯ್ಕೆ ಮಾಡುವುದು. ಆ ದಾರಿಯ ಮೇಲೆ ನಡೆಯುವುದು ಹೇಗೆ?

"ಸನ್ಮಾರ್ಗದಲ್ಲಿ ನಡೆದು
ದೇವನಾಗಲು ಬಹುದು
ದುರ್ಮಾರ್ಗದಲಿ ನಡೆದು
ದಾನವನು ಆಗುವನು
ಅದಕಾಗಿ ಮಾನವನ
ಮಾನವತೆ ಮಿಗಿಲೆಂದು
ಹೇಳಿದರೆ ತಪ್ಪೇನು
ಹುಲಿಯ ಸಿದ್ದೇಶ್ವರಾ"                (ಶ.ವ.ಶ.-೨೩) ಪು -೨೩

ಎಂದು ವಿವರಿಸುವುದರೊಂದಿಗೆ ಮಾನವ ನಡೆಯುಬೇಕಾಗಿರುವ ಪಥವನ್ನು ಸೂಚಿಸುತ್ತಾರೆ. ಹಾಗೂ ಸಂಸ್ಕೃತಿಯುಳ್ಳ ಮನುಷ್ಯನ ಪಥವಿದು ಎಂಬುದನ್ನು ಸೂಚ್ಯವಾಗಿ ತೋರಿಸುತ್ತಾರೆ.

ಮನುಷ್ಯನಲ್ಲಿ ಉನ್ನತ ವ್ಯಾಸಂಗ ಹೆಚ್ಚಾದಂತೆ ಅವನಲ್ಲಿ ಸಂಕುಚಿತತೆ ಬೆಳೆಯುತ್ತಿದೆ. ಅಲ್ಲಿ 'ನಾವು' ಬದುಕಿದರೆ ಸಾಕು ಎಂಬುದು ಹೋಗಿ ಮತ್ತೆ 'ನಾನು' ಬದುಕಿದರೆ ಸಾಕು ಎಂಬ ಮನೋವೃತ್ತಿ ಅಳವಡುತ್ತದೆ ಇದು ಸಲ್ಲ. ಇದು ಸುಸಂಸ್ಕೃತರ ಬದುಕಲ್ಲವೆಂಬುದು ಕವಿಯ ಧೋರಣೆ. ಕೇವಲ ಅಕ್ಷರ ಜ್ಞಾನ ಪಡೆದು ಪದವಿ ಪಡೆದುಕೊಂಡು ಓದಿದನ್ನು ಮರೆತು ಬಿಡುವ ಮನೋಭಾವನೆ ತೊರೆಯಬೇಕು. ಆ ಜ್ಞಾನದ ಸಾರದಿಂದ ಇಂದು-ಹಿಂದಿನದನ್ನು ಅರಿತುಕೊಂಡು ಮುಂದಿನ ಭವಿಷ್ಯಕ್ಕೆ ಅದನ್ನು ಬಾಳಬುತ್ತಿಯಾಗಿ ಸ್ವೀಕರಿಸಿ, ಬದುಕು ಅನುರಿಸಿಕೊಂಡು ಹೋಗಬೇಕು. ಅದೇ ನಿಜವಾದ ಶೈಕ್ಷಣಿಕ ಬದುಕು. ಜಗದ ಎಲ್ಲ ಮಹತ್ವವನ್ನು ಕಂಡುಕೊಂಡು ಓದುವುದರ ಮೂಲಕ ಅರಿತಿದ್ದನ್ನು ನಿಜ ಜೀವನದಲ್ಲಿ ಅಳವಡಿಸಿಕೊಂಡಾಗಲೇ ಅದು ಶ್ರೇಯಸ್ಕರವಾಗುತ್ತದೆ. ಅದನ್ನೇ

"ಅನುಭವಗಳ ಸಾರವನ್ನು
ಓದಿ ನೀನು ಹೀರಿಕೊಂಡು
ಕಾರ್ಯರೂಪದಲಿ ತಂದು
ತೋರಬೇಕು ಪೆದ್ದಜಿಮ್ಮ" (ಅ.ನೆ.ಸು.ಪೆ-೨೧೯)ಪು -೩೫

ಎಂದು ತಿಳಿಸುತ್ತಾರೆ. ಇಂದು ಶಿಕ್ಷಣ ನೀತಿ ಬದಲಾಗಿದೆ. ಬದಲಾವಣೆಯು ಪರಿವರ್ತನೆಯ ನಿಯಮವೂ ಹೌದು. ಈ ಬದಲಾವಣೆ ಶಿಕ್ಷಣದ ಮೂಲಕ ಉಂಟಾಗಬೇಕು, ಕೇವಲ ಅನುಕರಣೆಯ ಮೂಲಕ ಅಲ್ಲ. ಶಿಕ್ಷಣವೇ ಸಾಹಿತ್ಯದ ತಳಪಾಯ, ಅದಕ್ಕಾಗಿ ಶಿಕ್ಷಣದಲ್ಲಿ ಮಾನವತೆಯ ಸದ್ಭಾವ ಮೂಡಿ ನಿಲ್ಲಬೇಕು. ಅದನ್ನು ಅಳವಡಿಸಿಕೊಂಡಿರುವ ಸಂಸ್ಕೃತಿ ನಮ್ಮ ಸಮಾಜದ್ದಾಗಬೇಕು ಎನ್ನುವ ಕವಿ

"ಹೊಸ ಶಿಕ್ಷಣವು ದೇಶ ರಕ್ಷಣೆಯ ಭಾರವನು
ಮಾನವತೆ ಮಮತೆದಯೆ ಸದ್ಭಾವ ಸೂತ್ರವನು
ಎಲ್ಲರಲಿ ನೆಲೆಗೊಳಿಸಿ ಬಾಂಧವ್ಯ ಭಾವವನು
ಬೇಗ ಮೂಡಿಸಲೀಗ ಹುಲಿಯಸಿದ್ದೇಶ್ವರಾ" (ಯು-೩೧೨) ಪು -೪೭

ಎಂದು ಕರೆ ಕೊಡುತ್ತಾನೆ. ಇದಕ್ಕಾಗಿ ಮನುಷ್ಯ ಮನುಷ್ಯರಲ್ಲಿ ಪ್ರೇಮ, ಸದ್ಭಾವ, ಸೂತ್ರ ಅಳವಡಬೇಕು. ಸಹ ಬಾಂಧವ್ಯ ಭಾವ ಮೂಡಬೇಕು. ಹೊಸ ಯುಗದಲ್ಲಿ ಹೊಸ ಶಿಕ್ಷಣದಿಂದ ಎಲ್ಲರ ಮನೆ ಮನದಲ್ಲಿ ಪ್ರೀತಿ, ವಿಶ್ವಾಸ, ನಯ-ವಿನಯಗಳು ಕಾಣುವಂತಾಗ ಬೇಕೆನ್ನುವ ಕವಿ ಇಂತಹ ಜೀವನದ ಬದುಕನ್ನು ಕಾಣಬಯಸುತ್ತಾನೆ.

ಶಿಕ್ಷಕನ ಪಾತ್ರ ಬಹಳ ಮಹತ್ವದು ಏಕೆಂದರೆ ಒಂದು ಅರ್ಥದಲ್ಲಿ ಶಿಕ್ಷಕ ಸಾಹಿತಿ, ನಿರ್ಮಾಪಕ, ಸಮಾಜದ ರಕ್ಷಕ, ರಾಷ್ಟ್ರದ ಸನ್ಮಾರ್ಗ ತೋರುವವನು. ಇಂತಹ ಉನ್ನತ ಜವಾಬ್ದಾರಿಯನ್ನು ಹೊತ್ತಿರುವ ಶಿಕ್ಷಕನು ಹೇಗಿರಬೇಕು?

"ನಡೆ ನುಡಿಗಳಲ್ಲಿ ಭೇಧ ಇರದವನು ಶಿಕ್ಷಕನು
ನುಡಿದಂತೆ ನಡೆಯದವನ ಆಗದವ ಶಿಕ್ಷಕನು
ತನ್ನ ನಡೆ ನುಡಿಗಳಲ್ಲಿ ಒಂದೆನಿಸಿ ರಕ್ಷಕನು
ಆಗುವನು ಶಿಕ್ಷಕನು ಹುಲಿಯಸಿದ್ದೇಶ್ವರಾ" (ಯು-೪೪೮) ಪು-೬೭

ನಿಜವಾದ ಶಿಕ್ಷಕನ ಅರ್ಹತೆಗಳೇನು? ಎಂಬುವುದನಿಲ್ಲಿ ಸ್ಪಷ್ಟಪಡಿಸುತ್ತಾ, ಶಿಕ್ಷಕನಾಗಿ ಸೇವೆ ಸಲ್ಲಿಸಿರುವ ಖೂಬಾ ಅವರು ಈ ಗುಣಗಳಿಲ್ಲದ ಅನೇಕ ಶಿಕ್ಷಕರನ್ನು ಕಂಡಿದ್ದಾರೆ. ಇಲ್ಲಿ ಅಂತಹವರನ್ನು ಎಚ್ಚರಿಸುತ್ತಾರೆ.

"ಶಿಕ್ಷಕನೆ ಸಾಹಿತಿಯು ಶಿಕ್ಷಕನೆ ರಕ್ಷಕನು
ಶಿಕ್ಷಕನೆ ರಾಷ್ಟ್ರಕ್ಕೆ ಸನ್ಮಾರ್ಗ ತೋರುವನು
ಅವನ ಸ್ಥಿತಿಗತಿಯನ್ನು ಅರಿಯದಂತಿಹುದನ್ನು
ವಿವರಿಸಿದೆ ನಾಲ್ಕು ವಿಧ ಹುಲಿಯ ಸಿದ್ದೇಶ್ವರಾ " (ಯು-೪೪೫) ಪು-೬೬

ಈ ಶಿಕ್ಷಕನ ಜವಾಬ್ದಾರಿ ಘನವಾದುದು, ಅವನು ಒಂದರ್ಥದಲ್ಲಿ ಸಮಾಜದ ರಕ್ಷಕನಾಗಬೇಕೇ ಹೊರತು ಭಕ್ಷಕನಾಗಬಾರದು. ಶಿಕ್ಷಕನು ದುರ್ಬಲನಾದರೆ ದೂರುವನು, ಉತ್ತಮನಾದರೆ ವಿವರಿಸುತ್ತಾ ಹೇಳುವನು, ಭೋಧಿಸುತ್ತಾ ಹೇಳುವವನು ಮಹಾಶಿಕ್ಷಕನು ಆಗುವನು. ಇಂತಹ ಮಹಾನ್ ವ್ಯಕ್ತಿತ್ವ ಹೊಂದಿರಬೇಕಾದ ಶಿಕ್ಷಕನೆ ಭಕ್ಷಕನಾದರೆ ಮುಗ್ಧ ಮಕ್ಕಳ ಚಾರಿತ್ರ್ಯ ನಿರ್ಮಿಸುವುದೆಂತು

" ಶಿಕ್ಷಕನೆ ಭಕ್ಷಕನು ಆದರಾ ಅತಿದಿವ್ಯ
ಭಾವನೆಗೆ ಎಲ್ಲಿಂದ ಹೇಗೆ ಬರುವುದು ನವ್ಯ
ತೇಜರ ಕಳೆ ಮತ್ತು ನವಯುಗದ ಆ ಭವ್ಯ
ಚಾರಿತ್ರ್ಯ ನಿರ್ಮಾಣ ಹುಲಿಯ ಸಿದ್ದೇಶ್ವರಾ" (ಯು-೪೫೬) ಪು-೬೮

ನವಯುಗದ ಚಾರಿತ್ರ್ಯ ನಿರ್ಮಾಣ ಶಕ್ತಿ ಬರಬೇಕಾದರೆ ಅವನು ತುಂಬಾ ಯೋಗ್ಯನಾಗಿರಬೇಕೆನ್ನುವಲ್ಲಿ ಶಿಕ್ಷಕನಲ್ಲಿರಬೇಕಾದ ಅವಶ್ಯ ಗುಣವೇನು? ಎಂಬುದನ್ನು ತೋರಿಸುತ್ತಾರೆ.

"ಶಿಕ್ಷಕರೆ ಸಾಹಿತ್ಯ ನಿರ್ಮಾಣ ಮಾಡುವರು
ಅದರಿಂದ ಮಾನವತೆ ಅವರಲ್ಲಿ ಮೊದಲ ಗುರು
ತರವಾಗಿ ಮೂಡದಿರೆ ಸಾಹಿತ್ಯದಾ ಉಸಿರು
ಕಟ್ಟಿದಂತಾಗುವುದು ಹುಲಿಯ ಸಿದ್ದೇಶ್ವರಾ " (ಯು-೪೫೮) ಪು -೬೮

ಶಿಕ್ಷಕನು ಸಾಹಿತಿಯೂ ಆಗಿರುವುದರಿಂದ ಅವರಲ್ಲಿ ಸಂಸ್ಕೃತಿ ಉಳಿದುಕೊಳ್ಳಲಿ ಎಂಬ ಆಶೆ ಖೂಬಾ ಅವರದು. ಮಹಾ ಸಂಸ್ಕೃತಿಯ ಹೆದ್ದಾರಿ ನಮ್ಮಲ್ಲಿದೆ ಅದನ್ನು ಬಿಟ್ಟು ಅನ್ಯ ಸಂಸ್ಕೃತಿಯ ದಾರಿ ಹಿಡಿದರೆ ಏನಾಗಬಹುದು? ಮೂಡತೆಯೂ ಬೆಳೆಯಬಹುದು ಅದು ಜೀವನಕ್ಕೆ ಮಾರಕವಾಗುವುದಿಲ್ಲವೇ? ಎಂದು ಕವಿ ಕೇಳುತ್ತಾನೆ.

" ಹೆದ್ದಾರಿ ನಮ್ಮೆದುರು ಕಂಗೊಳಿಸುತ್ತಿರುವಾಗ
ಅಡ್ಡದಾರಿ ಹಿಡಿದು ನಡೆಯುತ್ತ ಹೋದಾಗ
ಏನಾಗಬಹುದೆಂಬ ಮೂಢತೆಯು ಬೆಳೆದಾಗ
ಹಿತವಾಗಬಹುದೇನು? ಹುಲಿಯ ಸಿದ್ದೇಶ್ವರಾ" (ಯು-೫೨೬) ಪು -೭೮
"ಎಲ್ಲ ಬಲ್ಲವಂತಾಗಿ ಹೀನ ಕೃತಿಯಲ್ಲಿ ತೊಳಲಿ
ಸುಜ್ಞಾನ ಭೋಧಿಸುತ ವಿಜ್ಞಾನ ಮಾರ್ಗದಲಿ
ನಡೆಯುತಿಹ ಮನುಜನರು ಹೇಗೆ ನಾ ವರ್ಣಿಸಲಿ
ತಿಳಿಯದಂತಾಗಿಹುದು ಹುಲಿಯ ಸಿದ್ದೇಶ್ವರಾ" (ಯು-೧) ಪು -೩

ದಿನಗಳು ಉರಿಳಿದಂತೆ ಜೀವನದ ಮೌಲ್ಯಗಳು ಕ್ಷಿಣಿಸುತ್ತಿವೆ. ತಮ್ಮ ಬಾಳನ್ನು ತಾವೇ ಅತಂತ್ರದ ಸ್ಥಿತಿಗೆ ಕೊಂಡೊಯುತ್ತಿರುವುದನ್ನು ಪರಂಪರೆಯಿಂದ ಉಳಿದು ಬಂದ ಮಾನವೀಯ ಸಂಬಂಧಗಳು ಕಳಚಿ ಹೋಗುತ್ತಿರುವುದನ್ನು, ತನ್ನ ತನದಲ್ಲಿ ತಾನು ಮರೆತು ಕ್ಷಣಿಕ ಸುಖಕ್ಕೆ ಹಾತೊರೆಯುತ್ತಿರುವುದನ್ನು, ಕವಿ ಖಂಡಿಸುವುದರೊಂದಿಗೆ ತಾವೆಲ್ಲರೂ ಬದುಕುವ ಸಂಸ್ಕೃತಿಯನ್ನು ರೂಪಿಸಿಕೊಳ್ಳಲು ಹೇಳುತ್ತಾರೆ. ತಾನು ಹಾಗೂ ತನ್ನ ಹೆಂಡಿರ ಮಕ್ಕಳು ಬದುಕಿದರೆ ಸಾಕೇ? ಉಳಿದವರ ವಿಚಾರ ಬೇಡವೇ? ಇದರ ಘೋರ ಪರಿಣಾಮವೇನಾಗಬಹುದು? ಎಂಬುದನ್ನು ನಮ್ಮ ಮುಂದಿಟ್ಟು, ಇಂದಿನ ಹೋರಾಟ ಬಡಿದಾಟದ ಬದುಕಿನ ಚಿತ್ರವನ್ನು ಕಟ್ಟಿ ತೋರಿಸುತ್ತಾರೆ.

"ಸಾವು ನೋವಿನ ಆಟ
ಜೀವನದ ಹೋರಾಟ
ಧನದ ಮೋಹದಿ ಮನವು
ಮನುಷ್ಯತ್ವವನು ಮರೆತು
ಸ್ವಾರ್ಥ ಸಾಧನೆಗಾಗಿ

ಮನುಜ ರಕ್ಕಸನಾಗಿ
ಬಿಡುತಿರುವುದನು ಕಂಡು
ಆಶೆ ಕುಂದುತ್ತಿಹುದು
ಮಾನವೀಯತೆ ಮೌಲ್ಯ
ವನು ಕಳೆದು ಕೊಂಡಿಹುದು
ಹೀಗಾದ ಮೇಲೆಂತು
ಬಾಳು ಸಾಗುವುದೆಂದು
ತಿಳಿಯದಂತಾಗಿಹುದು
ದುರ್ಬಲರು ಜಗದೊಳಗೆ
ಸತ್ತು ಬದುಕುತ್ತಿಹರು
ಸಾಮ್ಯವಾದದ ಮಾತು
ಸುಳ್ಳಾಗಿ ಬಿಟ್ಟಿಹುದು
ಅವರವರ ಭಾಗ್ಯ
ಎಂದೆನ್ನುವಂತಾಗಿ
ಸತ್ತು ಬದುಕುತ್ತಿಹರು
ಮಾನವತೆ ಮಾನವನ
ಮನದಿಂದ ದೂರಾಗಿ
ಸರ್ವನಾಶದ ಮಾರ್ಗ
ಸರಳವಾಗುತ್ತಿಹುದು
ಹೀಗಾಗದಂತಿರಿಸು ಹುಲಿಯಸಿದ್ದೇಶ್ವರಾ'' (ಶ.ವ.ಶ–೭೫) ಪು –೭೫

ಇಂದು ಸುಸಂಸ್ಕೃತ ಜೀವನ ಕಾಣಸಿಗುವುದು ವಿರಳ, ಜನರು ಪಾಪ–ಪುಣ್ಯಗಳನ್ನು ಸರಿಯಾದ ರೀತಿಯಲ್ಲಿ ಅರ್ಥೈಸಿಕೊಳ್ಳದೆ, ಸುಳ್ಳಿನಿಂದ ಸುಖದ ಜೀವನ ದೊರೆಯುವುದೆಂಬ ಭ್ರಾಂತಿಯಲ್ಲಿರುವುದನ್ನು, ಹಿಂಸೆ ಮಾಡಿ ಜೀವಿಸುವುದನ್ನು, ತಿಳಿಸುತ್ತಾ ಅಹಿಂಸೆಯ ತತ್ವದಲ್ಲಿ ಹುರುಳಿಲ್ಲದಂತಾಗಿದೆ. ಹೀಗಾಗಿ ಆಧುನಿಕ ಜೀವನ ಶೈಲಿಯೇ ವಿಭಿನ್ನವಾಗಿದೆ. ಈ ಜೀವನದಲ್ಲಿ ಮನುಷ್ಯತ್ವ ಮರೆಯಾಗಿನಿಂತು ಸರ್ವನಾಶದ ಮಾರ್ಗವನ್ನು ನಿರ್ಮಿಸಿಕೊಳ್ಳುತ್ತಿರುವುದನ್ನು ಸೂಚಿಸುವುದರೊಂದಿಗೆ ಇಂದಿನ ರೀತಿಯನ್ನು ತಿಳಿಸುತ್ತಾರೆ.

ಇಂದು ಮಾನವತೆಗಿಂತ ಮಿಗಿಲಾಗಿ ದಾನವತೆಯೇ ತಾಂಡವವಾಡುತ್ತಿರುವ ದೃಶ್ಯ ಸರ್ವೇ ಸಾಮಾನ್ಯವಾಗಿದೆ ಅದನ್ನು

''ಎನ್ನೀ ಈ ವಚಗಳಲಿ
ಮಾನವತೆ ದಾನವತೆ
ಎಂಬ ಪದಗಳ ಬಳಕೆ

ಅತಿಯಾಗಿ ಆಗಿಹುದು
ಈ ಎರಡರಾಟ ಸಾಗಿಹುದು
ಈ ಶಬ್ದಗಳು ಕಿವಿಗೆ
ಸುತ್ತಿ ಸುಳಿಯುತ್ತಿರಲಿ
ಎಂದು ಬಗೆದೆನು ನಾನು
ಅತಿಯಾಗಿ ತೋರಿದರೆ
ನಾ ಮಾಡಬೇಕೇನು?
ಈ ಎರಡು ಶಬ್ದಗಳ
ಮೇಲೆ ನಿಂತಿದೆ ಲೋಕ
ಅಳಿವು ಉಳಿವಿನ ಮತ್ತೆ
ಬದುಕು ಸಾವಿನ ಲೋಕ
ಮಾನವತೆ ದಾನವತೆ
ಎಂಬೆರಡು ಶಬ್ದಗಳು ಈ ಶತಕದಲಿ ಸುಳಿದು
ಮನುಜ ಮತಿಯಲಿ ಮತ್ತೆ
ಮತ್ತೆ ಸುಳಿಯುತ್ತಿರಲಿ
ಎಂದೆನಿಸಿ ಬಳಸಿಹೆನು
ಮಾನವತೆಯಿಂದುಳಿವು
ದಾನವತೆಯಿಂದುಳಿವು
ಈ ಎರಡು ಶಬ್ದಗಳು
ಮರೆಯದಂತಿರಲೆಂದು
ಎಷ್ಟು ಸಲ ಬಳಸಿದರು
ಸಾಕಾಗದಂತಾಯ್ತು ಹುಲಿಯಸಿದ್ದೇಶ್ವರಾ'' (ಶ.ವ.ಶ.–೯೮) ಪು –೯೮

ಎಂದು ಹೇಳುತ್ತಾ, ಹಲವು ಸಲ ಮೇಲಿಂದ ಮೇಲೆ ಬಳಸಿದ್ದೇನೆ. ಅದಕ್ಕೆ ಕಾರಣ ಇಂದು ಬೆಳೆಯುವ ಉಳಿಯುವ ಸಂಸ್ಕೃತಿಯ ಪರಿಚಯಕ್ಕಾಗಿ ಎಂಬುದನ್ನು ತಿಳಿಸುತ್ತಾರೆ. ಒಟ್ಟಾರೆಯಾಗಿ ಮೇಲಿನ ಹಲವು ಸಂದರ್ಭಗಳನ್ನು ಗಮನಿಸಿ ಹೇಳಬಹುದಾದ ಮಾತೆಂದರೆ ಖೂಬಾ ಅವರು 'ಸಂಸ್ಕೃತಿ' ಪದವನ್ನು ಇಲ್ಲಿ ಸುಗುಣಗಳ ಸಾಮರಸ್ಯ ಎಂಬ ಅರ್ಥದಲ್ಲಿ ಕಂಡುಕೊಂಡಿದ್ದು, ಅದರಲ್ಲಿ ಸಮರಸ ಹಾಗೂ ಸಂಪೂರ್ಣತೆಯನ್ನು ಸಮ್ಮಿಳಿತಗೊಳಿಸಿ ನೋಡುತ್ತಿದ್ದಾರೆ. ಸಂಸ್ಕೃತಿಯನ್ನು ಒಂದು ಬಗೆಯ ಆತ್ಮ ಶಿಕ್ಷಕಣವೆನ್ನುವ ರೀತಿಯಲ್ಲಿ ವಿವರಿಸುತ್ತಾ ಇದು ಮನಸ್ಸಿನ ವ್ಯಾಪಾರವಲ್ಲ; ಬರಿಯ ಬುದ್ಧಿಯ ವ್ಯಾಪರವೂ ಅಲ್ಲ; ಅದು ಜೀವಾತ್ಮದ ವ್ಯಾಪಾರವಾಗಿದೆ. ಸಂಗೀತ, ಸಾಹಿತ್ಯ, ನಾನಾಶಾಸ್ತ್ರ ಶಿಕ್ಷಣಗಳ ಸಾರ ಸಮ್ಮೇಳನವದು. ಜೀವನ ಸುಂದರವಾಗಬೇಕಿದ್ದರೆ ಅದನ್ನು ಅರಿತು ಆಚರಿಸಿಕೊಂಡು ನಡೆಯಬೇಕೆಂಬ ಉದ್ದೇಶದಿಂದ ಖೂಬಾರವರು ಇಲ್ಲಿ ಈ ಚಿಂತನೆಗೈದಿದ್ದಾರೆ ಎನ್ನಬಹುದು.

## ೪. ನಾಡು ನುಡಿ ಚಿಂತನೆಗಳು

ಸಾಹಿತ್ಯ ನಿಂತ ನೀರಲ್ಲ ಸದಾಹರಿಯುವ ಹೊಳೆ (ನದಿ) ಜೀವನದ ಬದಲಾವಣೆಯನ್ನು ಸದಾಬಳಗು ಮಾಡಿಕೊಂಡು ಮುನ್ನಡೆಯುವ ಸಾಹಿತ್ಯವು ಹಲವು ಚಿಂತನೆಗಳ ಸಂಗಮವಾಗುತ್ತದೆ. ಹೀಗಾಗಿ ಸಾಹಿತ್ಯದಲ್ಲಿ ಸಾಮಾಜಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಹಾಗೂ ಸಾಹಿತ್ಯಿಕ ಚಿಂತನೆಗಳಿರುವಂತೆ ದೇಶ ನಾಡು–ನುಡಿಯ ಚಿಂತನೆಯೂ ಪ್ರಮುಖವಾಗುತ್ತದೆ. ನಾಡು–ನುಡಿ ಪ್ರೇಮ, ದೇಶ ಭಕ್ತಿ ಹಾಗೂ ರಾಷ್ಟ್ರಪ್ರೇಮಗಳ ಪ್ರಸ್ತಾಪ ಮಾಡುವ ಹಾಗೂ ನಾಡಪರ ಕಾಳಜಿಗಳನ್ನು ಅಭಿವ್ಯಕ್ತಗೊಳಿಸಿರುವ ಸಾಹಿತಿಗಳಲ್ಲಿ ಖೂಬಾರವರು ಒಬ್ಬರು.

ಜನಪರ ಕಾಳಜಿಯುಳ್ಳ ಈ ಕವಿಯು ಭಾಷೆಯ ಸರಳತೆ, ಅಭಿವ್ಯಕ್ತಿ ಕ್ರಮ ಸೌಂದರ್ಯ ಹಾಗೂ ಹಿರಿಮೆಗರಿಮೆಗಳನ್ನು ವ್ಯಕ್ತಿ ನೆಲೆಯಲ್ಲಿ ಚಿತ್ರಿಸಿದ್ದರೂ ಅವು ಸಾರ್ವತ್ರಿಕ ನೆಲೆಯಲ್ಲಿ ಪರಿಣಾಮ ಬೀರುವ ಚಿಂತನೆಗಳಾಗಿರುವುದನ್ನು ಅರಿಯಬಹುದು. ಕಾವ್ಯದ ಕಲೆಯ ದೃಷ್ಟಿಯಿಂದ ಹಲವು ಇತಿಮಿತಿಗಳನ್ನು ಇಲ್ಲಿ ಗುರುತಿಸಬಹುದಾದರೂ, ಬೀದರ ಜಿಲ್ಲೆಯ ಭಾಷೆ–ಭಾವನೆಗಳ ಅಭಿವ್ಯಕ್ತಿ ಕ್ರಮದಿಂದ ಇವು ಗಮನಾರ್ಹವಾಗುತ್ತವೆ ಹಾಗೂ ಹಲವು ದೃಷ್ಟಿಯಲ್ಲಿ ತಮ್ಮದೇ ಆದ ಹೊಸತನವನ್ನು ಪ್ರದರ್ಶಿಸುತ್ತವೆ.

ಇಂದಿನ ಯುವಜನತೆಯಲ್ಲಿ ದೇಶ ಪ್ರೇಮ ಬತ್ತಿ ಹೋಗುತ್ತಿದೆ. ಪರಕೀಯದಿಂದ ಕಸಿದುಕೊಂಡಿರುವ ಭಾರತದ ಸ್ವಾತಂತ್ರ್ಯದ ಅರ್ಥ ಇವರಿಗಾಗುತ್ತಿಲ್ಲ. ಈ ಸ್ವಾತಂತ್ರ್ಯಕ್ಕಾಗಿ ಹೋರಾಡಿ ತ್ಯಾಗ–ಬಲಿದಾನಗಳನ್ನು ಮಾಡಿದ ಮಹಾಪುರುಷರ ನೆನಪು ಇವರಿಗಿದ್ದಂತಿಲ್ಲ. ಇಂದು ಸ್ವಾರ್ಥಿಗಳೇ ಇಲ್ಲಿ ತುಂಬಿ ನಿಂತಿದ್ದಾರೆ. ಈ ಸ್ವಾರ್ಥಿಗಳಿಂದ ದೇಶಪ್ರೇಮ ನಿರೀಕ್ಷಿಸಲು ಹೇಗೆ ಸಾಧ್ಯ? ಅದನ್ನೇ ಕವಿಯು – ಇಲ್ಲಿ

"ದೇಶ ಪ್ರೇಮದ ಭಾವ
ಬತ್ತಿ ಹೋಗಿಹುದಲ್ಲ
ದೇಶವನು ಪರಕೀಯ
ಪಾಶದಿಂದಂದು
ಮುಕ್ತಗೊಳಿಸಿದ ತ್ಯಾಗಿ –
ಗಳ ನೆನಪು ನಮಗಿಲ್ಲ
ಹೀಗಾಗಿ ದೇಶವನು
ನುಂಗಿ ಬಿಡುತಿರುವಂಥ
ಸ್ವಾರ್ಥಿಗಳ ಸ್ವಾರ್ಥವನು

ಬೇಗ ಅಡಗಿಸಿ ಈಗ
ದೇಶ ಪ್ರೇಮದ ಬೆಳೆಸು ಹುಲಿಯಸಿದ್ದೇಶ್ವರಾ''(ಶ.ವ.ಶ.–೬) ಪು –೬
ಎಂದು ಹೇಳುತ್ತಾರೆ.

ಇಂಗ್ಲೀಷರು ನಮ್ಮ ದೇಶದಿಂದ ಹೋದರೂ, ಅವರು ಬಿಟ್ಟುಹೋದ ಭಾಷೆಯು ಮಾತ್ರ ತೊಲಗಿಲ್ಲ. ಅಂದು ಉಳಿಸಿಹೋದುದು ಇಂದು ಬೆಳೆದು ಅದರ ವ್ಯಾಪ್ತಿ ಸರ್ವವ್ಯಾಪ್ತಿಯಾಗಿದೆ. ಇಂಗ್ಲೀಷ್ ಭಾಷೆಯ ಮೋಹದಿಂದ ಹೊರಬರದಿರುವುದು ದುಃಖದ ಸಂಗತಿಯಾಗಿದೆ ಎಂದು ಕವಿ ಕೊರಗುತ್ತಾನೆ.

"ಆಂಗ್ಲರನ್ನು ಓಡಿಸಿದ ನಮ್ಮ ದೇಶದ ಜನತೆ
ಆಂಗ್ಲ ಭಾಷೆಯ ಮೋಹ ಬಿಡಲು ಬರದಂತಾಯ್ತೆ?
ಎಂಬ ಕೊರಗೊಂದಿಹುದು ಕುಂದಾಗಿ ಭಾಧಕತೆ
ನೀಗಿಸುವ ಪರಿ ಹೇಳು ಹುಲಿಯ ಸಿದ್ದೇಶ್ವರಾ'' (ಯು – ೨೬೬) ಪು –೪೧

"ಅಮ್ಮಗೆ ಮಮ್ಮಿ ಅಪ್ಪಗೆ ಪಪ್ಪಾ
ಎನ್ನುವ ಮಕ್ಕಳ ಗತಿ ಏನಪ್ಪಾ
ನಮ್ಮನು ನಾವು ಮರೆಯುವ ಹಾಗೆ
ಅನಾಕರಣೆಯು ಬೇಡೆಲೊ ತಿಮ್ಮಪ್ಪ'' (ಐ.ಅ.ಪೌ. ೩೯) ಪು – ೫೮

ಕನ್ನಡದ ಸ್ಥಿತಿಯು ಇಂದು ಹಲವು ಭಾಷೆಗಳ ಮಿಶ್ರಣವಾಗಿದೆ. ನಮ್ಮ ಭಾಷೆಯ ಅಮ್ಮ, ಅಪ್ಪನಂತಹ ಪದಗಳು ಮಾಯವಾಗುತ್ತಿರುವ ಚಿಂತೆ ಕವಿಯನ್ನು ಕಾಡುತ್ತಿದೆ.

"ಹೀನ ಮತಿಯು ನಾಶವಾಗಿ
ಕನ್ನಡದಲಿ ಕೆಚ್ಚು ಮೂಡಿ
ಸರ್ವ ಮಂಗಳಾಗುವಂಥ
ಬೆಳಕು ಬರಲಿ ಪೆದ್ದ ಜಿಮ್ಮ'' (ಅ.ನ.ಸು.ಪೆ.–೮೦)ಪು –೧೫

ಕನ್ನಡಕ್ಕಾಗಿ ಕೈ ಎತ್ತು ಕಲ್ಪವೃಕ್ಷವಾಗುತ್ತದೆ ಎಂದು ಆಶಿಸುವ ಕುವೆಂಪು ಕನ್ನಡ ಭಾಷೆ ವಿಶ್ವಮಟ್ಟದಲ್ಲಿ ತನ್ನ ಅಸ್ತಿತ್ವ ಹೊಂದಲಿ ಎಂದು ಶ್ರಮಿಸಿದ್ದು ಮರೆಯಲಾಗದು ಅಂತೆಯೇ ಕನ್ನಡ ನಾಡಿನ ಮುದ್ದು ಮಕ್ಕಳು ಕನ್ನಡ ಓದಲು ಬರೆಯಲು ಕಲಿತು ಕನ್ನಡ ಭಾಷೆಯ ಹಿರಿಮೆಯನ್ನು ಅರಿಯಬೇಕಾಗಿ ಆ ಕಾಳಜಿಯನ್ನು ಇವರು ಹೇಳುತ್ತಾರೆ.

"ಕನ್ನಡ ನಾಡಿನ ಮುದ್ದು ಮಕ್ಕಳೆ
ಕನ್ನಡ ಭಾಷೆಯ ಹಿರಿಮೆಯನರಿಯಿರಿ
ಪಂಪ ಭಾರತದ ಗರಿಮೆಯ ಸರಿಯಿರಿ

ರನ್ನನ ಜನನ ಕೃತಿಗಳನರಿಯಿರಿ
ನಾಗಚಂದ್ರ ನಿರ್ಮಿತರಾವಲ್ಲಿ
ಉದಾತ್ತ ಮನಸ್ಸಿನ ಸ್ಥಿತಿಯನ್ನು ಕಾಣಿರಿ
ರಾಘವಾಂಕನನ್ನು ಮನದಲ್ಲಿ ನೆನೆಯಿರಿ
ಹರಿಹರದೇವನ ಭಕ್ತಿಯ ರಸವನು
ಕುಮಾರವ್ಯಾಸನ ಕಾವ್ಯದ ಸೊಬಗನ್ನು
ಕಾಣುತ ಮನವನು ತಣಿಸುತ್ತ ಸಾಗಿರಿ" (ಐ.ಅ.ಪೌ.–೩೭) ಪು.೫೬

ಕನ್ನಡದ ಮಹಾಕವಿಗಳಾದ ಪಂಪ, ರನ್ನ, ಜನ್ನ, ನಾಗಚಂದ್ರರನ್ನು ತಿಳಿಯಬೇಕು. ಅಂದಾಗ ಅವರು ಕನ್ನಡದ ಮಕ್ಕಳಾಗಲೂ ಸಾಧ್ಯವೆನ್ನುವ ಕವಿಯು ಇಂದಿನ ಮಕ್ಕಳು ಕನ್ನಡವನ್ನು ಕಲಿಯುವು ದರ ಜೊತೆಗೆ ಆಂಗ್ಲ ಭಾಷೆ ಕಲಿಯಲಿ ಆದರೆ ಮಾತೃ ಭಾಷೆಯನ್ನು ಮರೆಯಬಾರದು. ಮಾತೃ ಭಾಷೆಯಯನ್ನು ಮರೆತರೆ ಮಾತೃತ್ವದ ವಾತ್ಸಲ್ಯ, ಭಕ್ತಿ ಕಳಚಿ ಹೋಗುತ್ತದೆ. ಇಂದು ನಾವೆಲ್ಲರು ಪರ ಭಾಷೆಗೆ ಕೊಡುವ ಬೆಲೆಯಿಂದ ಆಗುವ ಅನಾಹುತ ಏನೆಂಬುದನ್ನು ಕವಿಯ ಮಾತಿನಿಂದಲೇ ತಿಳಿಯಬೇಕಾಗಿದೆ.

"ತಾಯಿಯ ಮರೆತರೆ ನಾಯಿಯ ಜನ್ಮ
ಬದುಕುವ ಬಾಳಿನ ಗತಿ ಏನು?
ಪರಭಾಷೆಗೆ ಸೋತಿಹ ನರಜನ್ಮ
ಬದುಕಿದ್ದರೂ ಮೃತವಲ್ಲೇನು!" (ಐ.ಅ.ಪೌ –೩೮) ಪು –೫೭

ಕನ್ನಡ ಉಳಿಸಿ, ಬೆಳೆಸಬೇಕಾದವರು ನಾವು ನಮ್ಮ ಕರ್ತವ್ಯದಿಂದ ಜಾರಿಕೊಳ್ಳದಂತೆ ಎಚ್ಚರಿಸುವ ಕವಿಯ ಕಳಕಳಿ ಇಲ್ಲಿ ಕಾಣುತ್ತದೆ. ತಾಯಿ ಭಾಷೆ ಮರೆತವನ ಜನ್ಮ ನಾಯಿಯ ಬದುಕಿನಂತೆ ಎಂಬುದು ಇಲ್ಲಿ ಪರಿಣಾಮಕಾರೀ ಮಾತಾಗುತ್ತದೆ.

"ಕನ್ನಡ ತಾಯಿಯ ಸೇವೆಯ ಮಾಡಿ
ಧನ್ಯರೆನಿಸಿಕೊಳ್ಳಲು ನೀವು
ಕನ್ನಡ ಉಳಿಸಿರಿ ಕನ್ನಡ ಬೆಳೆಸಿರಿ
ಕನ್ನಡವನು ಕಲಿಯಿರಿ ನೀವು" (ಐ.ಅ.ಪೌ–೩೮) ಪು –೫೭

ಎಂದು ಹೇಳುವಲ್ಲಿ ಪ್ರತಿಯೊಂದು ಮಗು ತಾಯಿಯ ನಿಸ್ವಾರ್ಥ ಸೇವೆ ಮಾಡಿ ಧನ್ಯನಾಗಬೇಕೆಂಬ ಹೇಳಿಕೆಯಲ್ಲಿ ಭಾಷಾ ಪ್ರೇಮ ಎದ್ದು ಕಾಣುತ್ತದೆ. ಕನ್ನಡ ಭಾಷೆಯ ಉಳಿವು – ಬೆಳೆಯು ಅದನ್ನು ಕಲಿತು ತಿಳಿಸುವಲ್ಲದೆ ಎಂಬುದನ್ನು ಕವಿ ಇಲ್ಲ ಹೇಳುವ

ಮೂಲಕ ಇಂಗ್ಲೀಷ್ ಶಾಲೆಗಳನ್ನು ಪ್ರವೇಶಿಸಿ, ಆಕಡೆ ಒಲವು ತೋರುತ್ತಿರುವವರಿಗೆ ಎಚ್ಚರಿಸಿ ಕನ್ನಡ ಕಲಿಯಲು ಸೂಚಿಸುತ್ತಾರೆ ಎನಿಸುತ್ತದೆ.

ಭಾರತ ದೇಶ ಹಲವು ಜನಾಂಗಗಳ ಬೀಡು, ಹಲವು ಧರ್ಮಗಳ ತವರೂರು ವಿವಿಧ ಭಾಷೆಯ ಮಾತನಾಡುವ ಜನರು ಎಲ್ಲೆಡೆ ಕಾಣಸಿಗುತ್ತಾರೆ. ಎಲ್ಲರಿಗೆ ಆಶ್ರಯ ನೀಡಿದ ಭಾರತಾಂಬೆಯ ನಡೆ ನುಡಿಯಲ್ಲಿ ವಿವಿಧತೆಯಿದ್ದರೂ, ವಿವಿಧತೆಯಲ್ಲಿ ಏಕತೆ ಮೂಡಲಿ ಎಂಬುದು ಕವಿಯ ಆಶಯೆ.

"ವಿವಿಧ ಜಾತಿ ನೀತಿ ನಡೆ
ವಿವಿಧ ಭಾಷೆಯಿಂದ ಬೆಳೆದು
ವಿವಿಧತೆಯಲ್ಲಿ ಏಕತೆಯನ್ನು
ಬೆಳೆಬೇಕು ಪೆದ್ದ ಜಿಮ್ಮ" (ಅ.ನ.ಸು.ಪೆ-೧೨೬)ಪು -೨೨

ಯಾವುದೇ ಧರ್ಮದವರಾಗಲಿ, ಯಾವುದೇ ಪಂಗಡವಾಗಲಿ, ಯಾವುದೇ ಭಾಷೆಯನ್ನಾಗಲಿ ಮಾತಾಡಲಿ. ಯಾವುದೇ ಪ್ರಾಂತ್ಯದಲ್ಲಿ ವಾಸಿಸಲಿ. ಎಲ್ಲರೂ ಭಾರತ ಮಾತೆಯ ಮಕ್ಕಳು, ಎಂಬ ಮನೋಭಾವನೆ ಬೆಳೆಯಲೆಂದು ಬಯಸುವ ಕವಿಯಲ್ಲಿ, ಏಕತೆಯ ಭಾವ ಇಂದು ಎಲ್ಲರಲ್ಲಿ ಬೆಳೆಯಬೇಕೆಂಬುದನ್ನು ಎತ್ತಿ ತೋರಿಸುವಂತಿದೆ.

ಇಂದಿನ ಕವಿಗಳು ಕಲ್ಪನಾ ಲೋಕದಲ್ಲಷ್ಟೇ ವ್ಯವಹರಿಸಬಾರದು, ಕಲ್ಪನೆಗಳು ಕೇವಲ ಮನುಷ್ಯನ ಬಾಹ್ಯ ಸೌಂದರ್ಯ ಹೆಚ್ಚಿಸುತ್ತವೆಯೇ ಹೊರತು ಆಂತರಿಕ ಸೌಂದರ್ಯವನ್ನಲ್ಲ ಹೀಗಾಗಿ ಕವಿಗಳಾದವರು ಸ್ವಾನುಭವದ ನುಡಿಗಳಿಂದ ಕಾವ್ಯವನ್ನು ಕಟ್ಟಿದಾಗ ಕವಿಯ ಉದ್ದೇಶ ಈಡೇರುತ್ತದೆ ಎಂಬುದು ಬಂಡೆಪ್ಪನವರ ಅನಿಸಿಕೆ. ಆಗ ಜೀವನದ ವಾಸ್ತವತೆಗೆ ಬೆಲೆ ದೊರೆಯುತ್ತದೆ ಕಾವ್ಯ ಸಹಜವಾಗುತ್ತದೆ. ಅಲ್ಲದೇ ಹೃದಯಾಳದಿಂದ ಹೊರ ಹೊಮ್ಮಿದ ಕವಿತೆ ಹೆಚ್ಚು ಪರಿಣಾಮಕಾರಿಯಾಗಿ ಜನತೆಯನ್ನು ತಲುಪುತ್ತದೆ. ವಾಸ್ತವ ಬದುಕಿನ ಚಿತ್ರಣವನ್ನು ಬಿಡಿಸಬೇಕಾದ ಕವಿಯು ಹೇಗಿರಬೇಕು? ಎಂಬುದು ಖೂಬಾರವರ ಮಾತಿನಲ್ಲಿ ಗಮನಿಸಬಹುದು.

" ಕವಿಯು ಯೋಗಿಯಾಗಬೇಕು
ಕಾವ್ಯ ಯೋಗದಲ್ಲಿ ಮುಳುಗಿ
ಸತ್ಯವನ್ನು ಕಾಣಬೇಕು
ತ್ಯಾಗಬೇಕು ಪೆದ್ದಜಿಮ್ಮ" (ಅ.ನ.ಸು.ಪೆ.-೧೮೯)ಪು -೩೧

ಯೋಗಿಯಾಗಿರಬೇಕು ಕವಿ ಎನ್ನುತ್ತ ಆತ ಕಾವ್ಯ ಯೋಗದಲ್ಲಿ ತಲ್ಲೀನನಾಗಿ ಆತನು ಸತ್ಯ, ಅಸತ್ಯತೆಯನ್ನು ಮುಚ್ಚುಮಾರಿಯಿಲ್ಲದೆ ಜನರ ಮುಂದಿಡಬೇಕು ಎಂಬುದು ಕವಿಯ ಧೋರಣೆ. ಜೀವನ ಕಲೆಯನ್ನು ಅರಿತ ಕವಿಯು ಒಬ್ಬ ಕಲೆಗಾರನಾಗುತ್ತಾನೆ. ಈ ಹಿನ್ನೆಲೆಯಲ್ಲಿ ನುಡಿ ಅರಳಬೇಕೆಂಬುದು ಖೂಬಾರ ಅನಿಸಿಕೆ ಅದನ್ನೇ

"ಜೀವನವೆ ಕಲೆ ಎಂದು
ಕಲೆಯ ಜೀವನ ಎಂದು
ಜೀವಿಸಲು ಕಲಿತವನೆ ಕಲೆಗಾರನೆಂದು
ಸಾಹಿತ್ಯ ಸಾರುತ್ತಿದೆ
ಸಫಲ ಜೀವಿಯೇ ಇಂದು ಸಫಲ ಕವಿ ಎಂದು!"

(ಐ.ಅ.ಪೌ.–೧೧)ಪು –೧೯

"ದಿನ ದಲಿತರಲ್ಲಿ ದೇವ
ರನ್ನು ಕಂಡು ನಮಿಸಿ ನಲಿವ
ಅಂತರಾಳದಿಂದ ಬರುವ
ಕವಿತೆ ಬೇಕು ಪೆದ್ದಜಿಮ್ಮ" (ಅ.ನ.ಸು.ಪೆ.– ೧೯೧) ಪು –೩೧

"ಸತ್ಯಕ್ಕಾಗಿ ಬದುಕು ನೀನು
ದೇಶ ನಾಡು ನುಡಿಯ ಹಿತಕೆ
ಸಾಯಲಂಜದಂತೆ ಬದುಕಿ
ಧೀರನಾಗು ಪೆದ್ದಜಿಮ್ಮ" (ಅ.ನ.ಸು.ಪೆ.–೨೨೨)ಪು –೩೫.

ಎಂದು ಹೇಳುತ್ತಾರೆ. ಭಾರತಾಂಬೆಯ ಒಡಲಿನಲ್ಲಿ ಜನ್ಮತಾಳುವ ಮಕ್ಕಳಿಗೆ ಸ್ವಾರ್ಥವನ್ನು ತೊರೆದು ನಾಡು–ನುಡಿಗಾಗಿ ಜೀವನ ಪಣಕೊಡಲು ಯುವ ಪೀಳಿಗೆಗೆ ಹೇಳುವಲ್ಲಿ, ಕವಿಯ ಜೀವನ ಪ್ರೀತಿ, ಸಾಹಿತ್ಯದ ಸಫಲತೆ, ನಾಡು–ನುಡಿಯ ಚಿಂತನೆಗಳು ಯಥಾರ್ಥವಾಗಿ ಅಭಿವ್ಯಕ್ತಗೊಂಡಿರುವು ದನ್ನಿಲ್ಲಿ ಕಾಣಬಹುದು.

"ಸಾಹಿತ್ಯ ಸಾಯುತಿದೆ ದಾರಿದ್ರ್ಯ ದಲಿ ಬಳಲಿ
ಜೀವನಕೆ ಮಾರ್ಗವನು ತೋರದಾ ರೀತಿಯಲಿ
ಮಾನವನ ಮತಿಯಲ್ಲಿ ಸಾಹಿತ್ಯಕೆಡೆಯಲ್ಲಿ?
ದುಡ್ಡಿನ ಮದದಲ್ಲಿ ಹುಲಿಯ ಸಿದ್ದೇಶ್ವರಾ" (ಯು–೧೩೦)ಪು –೧೧

ಸಾಹಿತ್ಯ ನಿರ್ಮಾಣವಾಗುವು ದು ಯಾತಕ್ಕಾಗಿ? ಎಂದು ಪ್ರಶ್ನೆ ಕೇಳುವಂತಿರುವ ಈ ಸಾಲುಗಳು ಕೇವಲ ತನ್ನ ಆನಂದಕ್ಕೆ ಮಾತ್ರ ಎಂದು ಕವಿತೆ ಬರೆಯವು ದಲ್ಲ. ಅದರಿಂದ ಸಮಾಜವನ್ನು ತಿದ್ದಲು, ಜನರಲ್ಲಿ ಒಳ್ಳೆಯ ಅಭಿರುಚಿ ಮೂಡಿಸಲು ಸಾಧ್ಯವಿಲ್ಲ. ಜೀವನದ ಮಾರ್ಗ ತೋರುವ ರೀತಿಯ ಸಾಹಿತ್ಯ ನಿರ್ಮಾಣವಾಗಬೇಕು. ದುಡ್ಡನ್ನು ಮಾಡಿ ಅಹಂಕಾರ ಬೆಳೆಸುವ ಸಾಹಿತ್ಯ ಸಾಹಿತ್ಯವೇ? ಅದಕ್ಕೆ ಸ್ಥಾನವಿದೆಯೇ? ಎಂಬುದು ಕವಿಯ ಇಲ್ಲಿಯ ಆಲೋಚನೆ. ಇದು ಪ್ರಸ್ತುತವಾದ ಒಂದು ಬಗೆಯ ಇಂಥ ಸಾಹಿತ್ಯವನ್ನು ಉಲ್ಲೇಖಿಸುವ ರೀತಿಯಲ್ಲಿ ಚಿಂತನೆಗೆ ಹಚ್ಚುತ್ತದೆ ಅಲ್ಲವೇ?

"ಸಾಹಿತ್ಯ ಹುಟ್ಟುವುದು ಜೀವನದ ಗತಿಯಿಂದ
ಜೀವನಕ್ಕೆ ಸನ್ಮಾರ್ಗ ಸಹಿತ್ಯ ದೇಶೆಯಿಂದ
ಬಂದಿರಲಿ ಇನ್ನೊಂದು ಅದಕಿರುವ ಕಲೆಯಿಂದ
ಬೆಳಗಲೀ ಜೀವನವು ಹುಲಿಯಸಿದ್ದೇಶ್ವರಾ" (ಯು- ೧೪) ಪು -೨೩

"ಸದ್ಭಾವ ಸದ್ಗುಣಕೆ ಬೆಲೆಯುಂಟು ಜಗದಲ್ಲಿ
ಅಂಥ ಸಾಹಿತ್ಯಕ್ಕೆ ನೆಲೆಯುಂಟು ಲೋಕದಲ್ಲಿ
ಮಾನವನ ಮತಿಯಲ್ಲಿ ತ್ಯಾಗ ಬದಲಾಯಿಸುತ್ತಿರಲಿ
ಸಾಹಿತ್ಯ ರೂಪದಲ್ಲಿ ಹುಲಿಯ ಸಿದ್ದೇಶ್ವರಾ" (ಯು-೨೮೩) ಪು -೪೩

ಸಹೃದಯರು ಕವಿತೆಗಳನ್ನು ಓದುವುದು ಕೇವಲ ರಾಗ, ಲಯಕ್ಕಾಗಿ ಅಥವಾ ಆನಂದಕ್ಕಾಗಿ ಅಷ್ಟೇ ಅಲ್ಲ. ನಿಜವಾದ ಓದುಗನು ಕವಿತೆಯೊಳಗೆ ಕವಿಯ ಸಾಮರ್ಥ್ಯ ಏನು? ಅವನ ಚಿಂತನೆಗಳು ಕಾವ್ಯದಲ್ಲಿ ಹೇಗೆ ವ್ಯಕ್ತವಾಗಿವೆ ಎಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕು ಎಂಬುದನ್ನು ತಿಳಿಸುವಲ್ಲಿ ಇದು ಮುಖ್ಯವಾಗುತ್ತದೆ.

ಸಾಹಿತ್ಯವು ಕೇವಲ ರಸಿಕರಿಗೆ ಕಾವ್ಯದ ಸವಿಯನ್ನು ಉಣ್ಣಬಡಿಸದೆ ಪ್ರತಿಯೊಬ್ಬ ಮನುಷ್ಯನ ಮನದಲ್ಲಿರುವ ಹೊಲಸನ್ನು ಹೊರದೂಡಲಿ ಎಂದು ಆಶಿಸುತ್ತಾನೆ ಇಲ್ಲಿ.

"ಸಾಹಿತ್ಯದಲ್ಲಿರುವ ಕಾವ್ಯ ರಸದಲ್ಲಿರುವ
ಚೆತನ್ಯ ಹೊರಬಂದು ಎಲ್ಲ ಕಲ್ಮಷ ತೊಳೆವ
ಮನುಮನದ ಬಿಕ್ಕಟ್ಟು ಒಕ್ಕಟ್ಟಿನಲ್ಲಿರುವ
ಗುಟ್ಟು ಶಬ್ಧಕ್ಕೆ ಕೊಟ್ಟು ಹುಲಿಯ ಸಿದ್ದೇಶ್ವರಾ" (ಯು - ೭೨) ಪು -೧೩

ಸಾಹಿತ್ಯ ಸಮಾಜದ ದರ್ಪಣವಾಗಿದೆಯಲ್ಲದೆ, ಸತ್ಯ ಮತ್ತು ಸೌಂದರ್ಯದ ಅಭಿವ್ಯಕ್ತಿಯೂ ಆಗಿದ್ದು, ಅದು ಕವಿಯ ಕವಿತ್ವದ ಮಹತ್ವವನ್ನು ತಿರುಹಬೇಕು. ಅಂದಾಗ ಜೀವನಕ್ಕೆ ಅದು ಹೊಸದಿಕ್ಕು ತೋರಿಸಲು ಸಾಧ್ಯ ಎಂಬ ಚಿಂತನೆಯು–

"ಜೀವನದ ದರ್ಪಣವೆ ಸಾಹಿತ್ಯ ವೆಂದನುವ
ಸಾಹಿತ್ಯವೇ ಜನತೆ ಹೊಸಮಾರ್ಗ ತೋರಿಸುವ
ಹೊಸದಿಕ್ಕಿನಲ್ಲಿ ನಡೆಸಿ ಹೊಸತನದವ ಮೂಡಿಸುವ
ಕಾವ್ಯದುದಯವು ಆಗಿ ಹುಲಿಯ ಸಿದ್ದೇಶ್ವರಾ" (ಯು- ೨೮೨) ಪು -೫೭

ಎನ್ನುವಲ್ಲಿ ಕಾಣಸಿಗುತ್ತದೆ. ಆದರೆ ಇಂದು ಕಲೆಗಾರ ಬಡವನಾಗಿದ್ದಾನೆ. ಅದು ಆತನ ಸಾಹಿತ್ಯ ರಚನೆಗೆ ಅದರಲ್ಲೂ ವಿಶೇಷವಾಗಿ ಪ್ರಕಟಣೆಗೆ ಅಡಚಣೆಯುಂಟಾ ಮಾಡುವುದನ್ನು ದುಡ್ಡಿನ ಮಹಿಮೆಯು ಸಾಹಿತ್ಯಕ್ಕಿಂತ ಹೆಚ್ಚಾಗಿರುವುದನ್ನು ತಿಳಿಸುತ್ತದೆ ಈ ಪದ್ಯ –

"ಕಲೆಗಾರ ಬಡಪಾಯಿ ಆದಮಾತ್ರಕೆ ಅವನ
ಬೆಲೆ ಕಟ್ಟುವವರಿಲ್ಲ ಧನಹೀನನಾದವನ
ಸಾಹಿತ್ಯ ಬೆಳಸಲಿಕೆ ಆಗದಂತಾದವನ
ದುಡ್ಡಿನ ಮಹಿಮೆವಿದು ಹುಲಿಯ ಸಿದ್ದೇಶ್ವರಾ" (ಯು-೧೩೬) ಪು -೨೨

ಒಟ್ಟಾರೆ ಭಾರತ ದೇಶವು ಹತ್ತು ಹಲವು ದೃಷ್ಟಿಯಿಂದ ಮುಂದುವರೆದು ವಿಶ್ವಮಟ್ಟದಲ್ಲಿ ತನ್ನದೆಯಾದ ಮೆರಗು, ಹಿರಿಮೆ ಕಾಣಬೇಕೆಂದು ಆಶಿಸುವ ಕವಿಯ ಭಾವನೆ ಪ್ರಗತಿಶೀಲವಾದುದು. ಇಲ್ಲಿ ಹಳೆಯದ್ದನ್ನು ಮರೆಯುದೆ ಹೊಸತನ್ನು ನಿರಾಕರಿಸದೆ ಎರಡನ್ನು ಸಮವಾಗಿ ಒಪ್ಪಿಕೊಳ್ಳುವ ಮನೋಭಾವನೆ ಕಂಡು ಬರುತ್ತದೆ. ಈ ಅಭಿವ್ಯಕ್ತಿಯಲ್ಲಿಯೂ ನುಡಿಯ ಕಾಳಜಿ ಇರುವು ದನ್ನು ಗಮನಿಸಬಹುದು.

" ಹೊಸ ಶತಕ ಮಾನವನ ವಿನೂತನ ವಿವೇಕಕೆ
ವಿಜ್ಞಾನ ಕಂಪ್ಯೂಟರ್ ಸೌಕರ್ಯ ಸಂಗಮಕೆ
ಬಳಕೆಯಾಗುತ ಮತ್ತು ಬೆಳದೇರಿ ಎತ್ತರಕ್ಕೆ
ಕಾವ್ಯದಲ್ಲೊಗೂಡಿ ಹುಲಿಯ ಸಿದ್ದೇಶ್ವರಾ" (ಯು-೬೦೧) ಪು -೮೯

ಕನ್ನಡ ವಿದ್ವಾಂಸರಾದ ಖೂಬಾ ಅವರು ಕನ್ನಡಾಭಿಮಾನಿ, ದೇಶಪ್ರೇಮಿ. ದೇಶದ ಏಕತೆ, ಕನ್ನಡದ ಉಳಿವು ಅವರನ್ನು ಸದಾ ಚಿಂತೀಡು ಮಾಡಿದೆ. ಜಾಗತೀಕರಣದ ಇಂದಿನ ಸಂದರ್ಭದಲ್ಲಿ ಕನ್ನಡದ ಸ್ಥಿತಿ-ಗತಿಗಳ ಚಿಂತನೆ ಸಾಗಿರುವಾಗ, ಅವರದೂ ಆ ನೆಲೆಯ ಚಿಂತನೆ ಎಂಬುದನ್ನು ನಾವಿಲ್ಲಿ ಅರಿಯಬಹುದು.

ಶತಕ ಗತಿಸಿದಂತೆ ಸಾಹಿತ್ಯದಲ್ಲಿ ಕೂಡ ನವೋದಯದಲ್ಲಿ ನವ್ಯ ಸಾಹಿತ್ಯ ಸೇರಿ ಮತ್ತೆ ನವ್ಯದಲ್ಲಿ ಬಂಡಾಯ ದಲಿತಗಳು ಮುಂದೆ ಬಂದವು. ಈಗ ನವೋತ್ತರವನ್ನು ಕಾಣುತ್ತೇವೆ ಎಂಬುದು ಕವಿಯ ಮಾತಿನಲ್ಲಿ ವ್ಯಕ್ತವಾಗಿದೆ.

" ಮುಂಬೆಳಕು ಹೋಗಿ ಬರೆ ನವೋದಯದುದಯಕ್ಕೆ
ನವ್ಯ ಸೇರಿತು ಮತ್ತೆ ನವ್ಯದಲ್ಲಿ ಮತ್ತದಕೆ
ಬಂಡಾಯ ದಲಿತಗಳ ಭೋರ್ಗರೆವ ಸೆಳತಕ್ಕೆ
ನವೋತ್ತರವು ಈಗ ಹುಲಿಯ ಸಿದ್ದೇಶ್ವರಾ" (ಯು- ೧೮೪)ಪು -೨೯

ಕಾವ್ಯದಲ್ಲಿ ಕ್ರಾಂತಿ ಸಾಕು ಶಾಂತಿ ಪಥ ಇಂದು ಬೇಕೆನ್ನುವ ಕವಿ ಸುವಿಚಾರದೊಂದಿಗೆ ಜನರನ್ನು ನಡೆಯುವಂತೆ ಮಾಡುವುದು ಇಲ್ಲಿ ಮುಖ್ಯವಾಗಬೇಕು. ಎಲ್ಲರಲ್ಲಿ ಮಾನವೀಯತೆ ಮನೆ ಮಾಡಿರಲೆಂದು ಕವಿಯು ಹಂಬಲಿಸುತ್ತಾನೆ. ಈ ಹೊಸ ಶತಕದಲ್ಲಿ ಹೊಸದಾದ ದಿವ್ಯ ಬೆಳಕು ಕಾಣಲೆಂದು ದೇವರಲ್ಲಿ ಪ್ರಾರ್ಥಿಸುತ್ತಾನೆ. ಅದಕ್ಕೆ ಪೂರಕವಾದ ಸಾಹಿತ್ಯ ನಿರ್ಮಾಣಕ್ಕೆ

ದಯತೋರಿಸು ಎಂದು ಕೇಳುವಲ್ಲಿ ಇಂದು ನುಡಿ ಸಾಹಿತ್ಯ ಕ್ರಮಿಸಬೇಕಾದ ಮಾರ್ಗವಿದು ಎಂಬುದರ ಚಿಂತನೆ ಅವರಲ್ಲಿ ಕಾಣುತ್ತದೆ.

" ಹೊಸ ಶತಕ ಹೊಸ ದಿವ್ಯ ಬೆಳಕು ಕಾಣಲಿ ದೇವ
ನಿನ್ನ ಕೃಪೆಯಿಂದೆನ್ನ ಕಾವ್ಯದಲಿ ಹೊಸ ಭಾವ
ಮೂಡಿ ಬರುವಂತಾಗಿ ಶತಕಕ್ಕೆ ಬೇಕೆನ್ನುವ
ಕಾವ್ಯ ಮೂಡಿಸುದೇವ ಹುಲಿಯ ಸಿದ್ದೇಶ್ವರಾ" (ಯು- ೪೬೫) ಪು -೬೯

ಈ ಆಶಯವೇ ಕವಿಯ ಇನ್ನೊಂದು ರೀತಿಯಲ್ಲಿ ಅರಿಯಬಹುದು.

" ಶತಕಗಳ ಚೌಕಟ್ಟು ವಚನಗಳ ಈ ಗುಟ್ಟು
ನನ್ನಂತರಾಳದಲಿ ಮೂಡಿ ಬಂದಿಹ ಹುಟ್ಟು
ಒಪ್ಪಿಕೊಂಡರೆ ಜನಕೆ ನನ್ನ ಬೆಳಕನು ಕೊಟ್ಟು
ಬೆಳಕಿನಲ್ಲಿ ನಲಿಯುತ್ತ ನಡೆಯುತ್ತ ಹಿಂದೇಟು
ಹಾಕದಂತಾಗುವುದು ವಚನ ಶತಕದ ಕಟ್ಟು
ಇಲ್ಲದಿದ್ದರೆ ನನ್ನ ವ್ಯರ್ಥ ಸಾಹಸ ಕೆಟ್ಟು ಸುಟ್ಟು
ಸುಡುಗಾಡು ಸೇರುವುದು ನನ್ನ ಶತಕದ ಹುಟ್ಟು
ನಿನ್ನಲ್ಲಿ ನಾ ಬೆರೆತು ಬರೆದ ಮಾತ್ರೆಯ ಕಟ್ಟು
ಬೆಳಕು ತೋರದ ಹಾಗೆ ಕೆಟ್ಟು
ಹೋಗದಂತಾಗಲೈ ಹುಲಿಯಸಿದ್ದೇಶ್ವರಾ" (ಶ.ವ.ಶ-೧೦೦)ಪು -೧೦೦

ಹೀಗೆ ಹತ್ತು ಹಲವು ಚಿಂತನೆಗಳು ಚುಟುಕುಗಳಂತೆ ಕಾಣುವ ವಚನಗಳಲ್ಲಿ ಓದುಗರ ಮನಸ್ಸನ್ನು ಬಡಿದೆಬ್ಬಿಸುತ್ತದೆ. ಇವು ಎಂಥಹ ಸಾಹಿತ್ಯ ಪ್ರಕಾರದಲ್ಲಿ ಸೇರುತ್ತವೆ ಎಂಬುದನ್ನು ಓದುಗರ ನಿರ್ಧಾರಕ್ಕೆ ಬಿಡುವ ಕವಿಯು ಆ ಮುಖಾಂತರ ತನ್ನ ವಚನ ರಚನೆಯ ಉದ್ದೇಶ, ಸಾರ್ಥಕತೆಯನ್ನು ತಿಳಿಸುತ್ತಾರೆ.

ಒಟ್ಟಿನಲ್ಲಿ ಬಂಡೆಪ್ಪ ಖೂಬಾರವರ ಕಾವ್ಯ ಸಂಕಲನಗಳನ್ನು ಭಾಷಾ ದೃಷ್ಟಿಯಿಂದ ಗಮನಿಸಿದಾಗ ಹೆಚ್ಚು ಕಡಿಮೆ ಎಲ್ಲ ಕವಿತೆಗಳು ಸರಳ, ಸುಂದರ ಹಾಗೂ ನೇರ ಸ್ಪಷ್ಟತೆಯ ಗುಣವನ್ನು ಪ್ರಧಾನವಾಗಿ ಉಳಿಸಿಕೊಂಡಿವೆ. ಎಲ್ಲಿಯೂ ಉದ್ವೇಗಕ್ಕೆ ಅತಿವರ್ಣನ ವಿನ್ಯಾಸಕ್ಕೆ ಎಡೆಮಾಡಿಕೊಟ್ಟಿಲ್ಲ. ಆಡಂಬರದ ಮಾತು ಕಡಿಮೆ ದೊಡ್ಡ ಸಮಾಸ, ದೊಡ್ಡ ಸಂಧಿಗಳಿಲ್ಲದ ವಾಕ್ಯಗಳಿದ್ದು ಹಿತಮಿತವಾದ ಆಡುಭಾಷೆಯ ಬಳಕೆಯಿಂದ ಗಮನ ಸೆಳೆಯುತ್ತವೆ. ಆ ಮೂಲಕ ಸರಳತೆ, ಸುಭಗತೆಯನ್ನು ಅಭಿವ್ಯಕ್ತಿವಾಹಕವನ್ನಾಗಿಸಿಕೊಂಡು ನುಡಿ ಚಿಂತನೆಗೆ ತೊಡುಗುತ್ತಿವೆ ಎನ್ನಬಹುದು.

* ವೈಜ್ಞಾನಿಕ ಚಿಂತನೆಗಳು :

ಬದಲಾವಣೆಯು ಪ್ರಕೃತಿಯ ನಿಯಮ. ವಾಸವಿಕತೆಯ ಮೂಲ ನಿಯಮಗಳಲ್ಲಿ ಬದಲಾವಣೆಯೂ ಒಂದಾಗಿದೆ. ಪ್ರಕೃತಿಯ ಪ್ರತಿಯೊಂದು ಅಂಶವೂ ಬದಲಾವಣೆಗೆ ಹೊರತಲ್ಲ. ಹಾಗೆಯೇ ಮಾನವನ ಸಮಾಜವೂ ಕೂಡ ಈ ನಿಯಮಕ್ಕೆ ಒಳಪಡುತ್ತದೆ. ಕಾಲಕ್ಕನುಗುಣವಾಗಿ ಸಾಮಾಜಿಕ ವ್ಯವಸ್ಥೆಗಳು ನಿರಂತರವಾಗಿ ಬದಲಾಗುತ್ತಿರುತ್ತವೆ. ಅವು ಸ್ವಲ್ಪವಾಗಿರಬಹುದು, ಹೆಚ್ಚಾಗಿರಬಹುದು. ಈ ಸಮಾಜ ಬದಲಾಗದೆ ಸ್ಥಾಯಿಯಾಗಿ ಇರುವ ಜಡವಸ್ತುವಲ್ಲ ಎಂಬುದು ಒಂದು ಕಾರಣ. ಸಮಾಜ ಚಲಾನಾತ್ಮಕವಾದುದು, ಪರಿವರ್ತನ ಶೀಲಕ್ಕೆ ಹಲವು ಕಾರಣಗಳು ಇವೆ. ಪ್ರಾಕೃತಿಕ ಅಂಶಗಳು ಅನ್ಯ ಸಂಸ್ಕೃತಿಯ ಪ್ರಭಾವ ಸಮೂಹ ಮಾಧ್ಯಮಗಳು, ಔದ್ಯೋಗಿಕ ಅಂಶಗಳು, ಸಾಹಿತ್ಯ ಕಲೆ ಮುಂತಾದ ಬದಲಾವಣೆಗಳು ಸಾಂಸ್ಕೃತಿಕ ಜೀವನವನ್ನು ಕಂಡು ಅವುಗಳಲ್ಲಿ ನವೀನತೆಯುನ್ನು ಗುರುತಿಸುವ ಸಾಹಿತಿಗಳು ಅವುಗಳೊಂದಿಗೆ ವೈಜ್ಞಾನಿಕ ಚಿಂತನೆಯನ್ನು ಸಮೀಕರಿಸಿ ಅಭಿವ್ಯಕ್ತಿಸುವಂತಹ ಚಿಂತಕರಲ್ಲಿ ಖೂಬಾರವರು ಒಬ್ಬರು.

ಬಂಡೆಪ್ಪ ಅವರು ಸಮಾಜದ ಹಲವು ಸ್ವರೂಪ – ಕೂರುಪದ ಮುಖಗಳನ್ನು ಕಂಡು ಅದನ್ನು ಕಂಡಹಾಗೆಯೇ ಬಿಚ್ಚಿಡುತ್ತಾರೆ. ಅದಕ್ಕೆ ಕಲ್ಪನೆಯ ಬಣ್ಣ ತುಂಬದೆ ಅದನ್ನು ಇದ್ದಂತೆ ತಿಳಿಸುವ ಇವರ ಶೈಲಿ ಮೆಚ್ಚುವಂತಹದು. ಸಾಮಾಜಿಕ ಚಿಂತನೆಯುಳ್ಳ ಈ ಕವಿ ಸಮಾಜದಲ್ಲಿ ಏರುಪೇರುಗಳಿಂದ ಚಿಂತನೆಗೆ ಒಳಗಾಗುತ್ತಾರೆ. ಎಲ್ಲರ ಬದುಕು ಸುಂದರವಾಗಿರಬೇಕೆಂಬುದು ಅವರ ಆಸೆ. ಆ ಸುಂದರ ಬದುಕಿಗೆ ಕಲಂಕ ತರುವ ಸಾಮಾಜಿಕ ಸಂದರ್ಭಗಳನ್ನು ಅವರು ಖಂಡಿಸುತ್ತಾರೆ. ಪುರಾತನ ಸಂಸ್ಕೃತಿಯನ್ನು ಮೆಚ್ಚಿಕೊಂಡಿರುವ ಕವಿಗೆ ಇಂದಿನ ಆಧುನಿಕತೆಯು ಸಹನಿಯವಾಗುವದಿಲ್ಲ. ಹಳೆಯ ರೈತನ ಉಪಕರಣಗಳು ಮೂಲೆ ಸೇರಿದ್ದುದನ್ನು ಅವರು ಒಪ್ಪುವುದಿಲ್ಲ. ಇಂದಿನ ಯಂತ್ರಗಳ ಸಾಮ್ರಾಜ್ಯ ಹಳ್ಳಿಗಳ ಕಾಯಕಕ್ಕೆ ಮುಳುವಾಗಿ ನಿಲ್ಲುವುದನ್ನು ವಿವರಿಸುತ್ತಾರೆ. ಆಧುನಿಕ ಯುಗದಲ್ಲಿ ಯಂತ್ರಗಳ ಅವಿಷ್ಕಾರದ ಜೊತೆಗೆ ಜೀವನವು ಯಂತ್ರದಂತೆ ಸಾಗುತ್ತದೆ. ಇಲ್ಲಿ ಜೀವನದ ನಿಜವಾದ ಅರ್ಥವೂ ಕಣ್ಮರೆಯಾಗುತ್ತಿರುವುದು ತುಂಬಾ ಶೋಚನೀಯ. ಇಂತಹ ಬದುಕಿನ ಅನ್ವೇಷಣೆಯನ್ನು ಕವಿಯೂ

"ನವೀನ ಯುಗದ ಯಂತ್ರ ತಂತ್ರ
ತ್ವರಿತ ಗತಿಯ ವೇಗ ಸೂತ್ರ
ದಲ್ಲಿ ಮುಳುಗಿ ಏಳುತ್ತಿರುವ
ಬಾಳು ನೋಡು ಪೆದ್ದಜಿಮ್ಮ"        (ಅ.ನ.ಸು.ಪೆ–೨೭) ಪು –೭

ಎನ್ನುವ ಮೂಲಕ ಶೋಧಿಸುತ್ತಾರೆ. ಇಂದು ಸಮಾಜದಲ್ಲಿ ಮನುಷ್ಯ ಬದುಕುವ ರೀತಿ ನೋಡಿದರೆ ಯಾರಿಗಾಗಿ ಯಾರು ಇಲ್ಲ ಎಂಬುವ ವಿಚಾರ ಎಲ್ಲೆಲ್ಲಿ ಕಾಣುತ್ತಿದೆ ಎನ್ನುವ ಕವಿಯೂ ಪ್ರತಿಯೊಬ್ಬರ ಜೀವನ ತಿಳಿದೆ, ತಿಳಿಯದೋ ನರಕದ ದಾರಿಯಲ್ಲಿ ಸಾಗುತ್ತಿದೆ. ಬೇರಿಲ್ಲದ ಮರವಾಗುತ್ತಲಿದೆ ಎಂದು ಚಿಂತಿಸುತ್ತಾರೆ.

"ನರನ ಬಾಳುವೆಯು ನರಕದ ಹಾದಿ
ಹಿಡಿದು ಹೋಗುತ್ತಿದೆ ಅರಿಯದ ಹಾಗೆ
ಬಾಳಿನ ಗೋಳಿನ ಬೀಳುವ ಏಳುವ
ಸ್ಥಿತಿಯನ್ನು ಕಾಣುತ್ತ ನಾ ಮಲಗಿದೆ"

(ಐ.ಅ.ಪೌ.–೫)ಪು –೩೬

ಎನ್ನುವಲ್ಲಿ ಕವಿಯು ಕಲಿಯುಗದ ನೈಜ ಚಿತ್ರಣವನ್ನು ನಮ್ಮ ಮುಂದೆ ಇಡುತ್ತಾನೆ. ಈ ಯುಗದ ಮಾನವನು ತನ್ನ ಬುದ್ಧಿಯ ಬಲದಿಂದ ಗಗನದತ್ತೆರಕ್ಕೆ ಬೆಳೆದಿದ್ದಾನೆ. ವಿಜ್ಞಾನದಿಂದ ಎಲ್ಲವನ್ನು ಅರಿತವನಂತಾಗಿದ್ದಾನೆ ಎಂಬುದು ಕವಿಯ ಅನಿಸಿಕೆ. ಅದಕ್ಕೆ ಸಮನಾಗಿ ಸುಜ್ಞಾನ ಬೆಳೆದಿಲ್ಲ ಎಂಬುದು ಕವಿಯ ಅನಿಸಿಕೆ.

ವಿಜ್ಞಾನ ಮತ್ತು ಅಜ್ಞಾನದ ಅಂತರವೂ ಬಹಳ ಇದೆ. ವಿಜ್ಞಾನವನ್ನು ಅರಿತವರಲ್ಲಿ ಆತ್ಮ ನಂಬಿಕೆಯ ಹುರುಳು ಇಲ್ಲ ಎನ್ನುತ್ತಾ, ತಾಂತ್ರಿಕತೆಯ ಪ್ರಭಾವ ಹೆಚ್ಚಾದುದರಿಂದ ಭೌತಿಕತೆಗೆ ಮಾರು ಹೋದ ಜನರಲ್ಲಿ ಅದು ಹೇಗೆ. ಸುಳಿಯುತ್ತದೆ ಎಂದು ಪ್ರಶ್ನಿಸುತ್ತಾರೆ. ಅಂತವರಿಗೆ ಕವಿಯು ಇಲ್ಲಿಯವರೆಗೆ ನಂಬಿದವರು ಕೆಟ್ಟಿಲ್ಲ, ನಂಬದೆ ಇರುವವರು ಕೆಟ್ಟರೆ ಕೆಡಲಿ ಎಂಬುದು ಕವಿ ಮಾತು.

"ವಿಜ್ಞಾನ ಬೆಳೆದರೂ ಅಜ್ಞಾನ ಅಳಿದಿಲ್ಲ
ಆತ್ಮದಸ್ತಿತ್ವಕ್ಕೆ ವಿಜ್ಞಾನ ಅರಿತಿಲ್ಲ
ಒಂದುದೆಲ್ಲಿಂದೆಂದು ಹೇಳಲದ ಕಳವಿಲ್ಲ
ಆತ್ಮವನು ಕಂಡಿಲ್ಲ ಹುಲಿಯ ಸಿದ್ದೇಶ್ವರಾ" (ಯು–೫೦೩)ಪು –೭೫

"ಜೀವನದ ವೈಚಿತ್ರ್ಯ ಸಾಹಿತ್ಯ ಅರಿತಿಹುದು
ವಿಜ್ಞಾನ ಬೆಳೆದಂತೆ ಅಜ್ಞಾನ ಬೆಳೆದಿಹುದು
ಬುದ್ಧಿ ವೇಗದ ಜೊತೆಗೆ ಭಾವ ವೇಗವು ಕುಸಿದು
ಅಂತರವು ಬೆಳೆದಿಹುದು ಹುಲಿಯ ಸಿದ್ದೇಶ್ವರಾ" (ಯು–೫೩೪)ಪು –೭೯

ವಿಜ್ಞಾನದಲ್ಲಿರುವ ಅಜ್ಞಾನ ಸಂಗತಿಗಳ ವಿವರಣೆ ಇಲ್ಲಿದೆ. 'ಬಾಲಕೃಷ್ಣನ ಬಾಯಿಯಲ್ಲಿ ಬ್ರಹ್ಮಾಂಡವೇ ಅಡಗಿದಂತೆ' ಇಂದು ಮಾನವನು ತನ್ನ ಬುದ್ಧಿಯನ್ನು ಸಂಶೋಧನೆ ಒರೆಹಚ್ಚಿ ಚಂದ್ರನ ಮೇಲೆ ಕಾಲು ಊರಿ ನಿಲ್ಲುವಷ್ಟು ಮಟ್ಟಕ್ಕೆ ಬೆಳೆದಿದ್ದಾನೆ. ಇದು ಸಂತೋಷದ ವಿಷಯವಾದರೆ, ದಿನೇ ದಿನೇ ಹೆಚ್ಚುವ ಜನಸಂಖ್ಯೆಯಂತೆ ಸವಲುತ್ತು ಹೆಚ್ಚುತ್ತಿಲ್ಲ. ಆದರಿಂದ ಜನರಲ್ಲಿ ದ್ವೈತ, ಅಸೂಯೆ, ಸುಲಿಗೆ ಬೆಳೆದು ಬುದ್ಧಿಯನ್ನು ಮಂದಗೊಳಿಸಿದೆ ಎಂಬುದನ್ನು

" ವಿಜ್ಞಾನ ಬೆಳೆದಂತೆ ಸುಜ್ಞಾನ ಬೆಳೆದಿಲ್ಲ
ಜನಸಂಖ್ಯೆ ಬೆಳೆದಂತೆ ಸವಲತ್ತು ಬೆಳೆದಿಲ್ಲ
ವಿಷಮತೆಯು ಬೆಳೆಯುತ್ತಾ ಭೂತವಾಗಿದೆಯಲ್ಲ
ಮಂಕು ಕವಿಯುತ ಮತಿಗೆ ಹುಲಿಯ ಸಿದ್ದೇಶ್ವರಾ'' (ಯು-೧೪೩)ಪು -೨೩

ಎಂದು ಹೇಳುವಲ್ಲಿ ವಿಜ್ಞಾನ ಸುಜ್ಞಾನಗಳಲ್ಲಿಯ ಅಂತರವನ್ನು ಬಹಿರಂಗ ಪಡಿಸುತ್ತಾರೆ. "ವಿಜ್ಞಾನ ಮತ್ತು ತಂತ್ರಜ್ಞಾನ ಆಧುನಿಕ ಸಮಾಜದ ಎರಡು ಮುಖ್ಯ ಲಕ್ಷಣಗಳಾಗಿವೆ. ಪ್ರಚಲಿತ ಕಾಲವನ್ನು 'ವೈಜ್ಞಾನಿಕ ಯುಗ' ಎಂದು ಕರೆಯಲಾಗುತ್ತದೆ"[೫]. ವಿಜ್ಞಾನ ಆರಂಭದಿಂದಲೂ ಮಾನವ ನಾಗರಿಕತೆಯ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದೆ. ಹಾಗೂ ಅನೇಕ ನೂತನ ಅನ್ವೇಷಣೆಗಳು ನಡೆದು, ಹೊಸ ಹೊಸ ವಿಚಾರಗಳು ಮತ್ತು ವಸ್ತುಗಳನ್ನು ಕಂಡುಹಿಡಿಯಲಾಯಿತು. ಇದರಿಂದಾಗಿ ಮಾನವನು ಶೀಘ್ರವಾಗಿ ಹೆಚ್ಚು ಹೆಚ್ಚು ಸರಕುಗಳನ್ನು ತಯಾರಿಸಲು ಅರ್ಹನಾದನು. ಒಟ್ಟಿನಲ್ಲಿ ಒಂದು ಬಗೆಯ ನೈಪುಣ್ಯ ಅಥವಾ ಪ್ರಯೋಗ ವಿಧಾನ ಅಥವಾ ತಂತ್ರ ಉಂಟಾಗಿ ಪ್ರಯೋಗ ವಿಧಾನಗಳನ್ನು ಕ್ರಮ ಬದ್ಧತೆ ವ್ಯಾಪಕತೆಯ ಕಾರಣದಿಂದಾಗಿ ಔದ್ಯೋಗಿಕ ವಿಜ್ಞಾನ ಅಥವಾ ತಂತ್ರಜ್ಞಾನ ಬೆಳೆಯಿತು.

ಜನಸಂಖ್ಯೆ ಹೆಚ್ಚಳದಿಂದ ನಿರುದ್ಯೋಗ ಹೆಚ್ಚಾಗುತ್ತದೆ. ಉದ್ಯೋಗ ಸೃಷ್ಟಿಸಲು ಔದ್ಯೋಗಿಕರಣ ಮುಖ್ಯ ಪರಿಣಾಮವಾಗಿ ಉದ್ದಿಮೆಗಳು, ಕಾರ್ಖಾನೆಗಳು ತೆರೆಯಬೇಕು. ಅದಕ್ಕೆ ಪರಿಸರ ನಾಶಮಾಡುವದಲ್ಲದೆ ಕುಡಿಯುವ ನೀರು, ಉಸಿರಾಡುವ ಗಾಳಿ, ತಿನ್ನುವ ಆಹಾರ, ವಾಸಿಸುವ ಭೂಮಿ ಎಲ್ಲವೂ ವಿಷಮಯವಾಗುತ್ತದೆ. ಆದರೆ ಬೇರೆ ದಾರಿ ತೋರದೆ ಸಕಾಲಕ್ಕೆ ಬೆಳೆಯಾಗದ ಕಾರಣ ಸಹಜವಾಗಿ ಹಳ್ಳಿಯ ಜನರು ಪಟ್ಟಣ ಕಡೆಗೆ ವಲಸಿ ಬರುವುದು ಹೆಚ್ಚಾಗುತ್ತದೆ. ಹೀಗೆ ಪಟ್ಟಣಗಳು ಬೆಳೆಯುಬೇಕಾದರೆ ಪರಿಸರ ನಾಶ ಮಾಡಬೇಕು ಮುಂದೇನು? ಎಂಬುವ ಬದುಕಿನ ಬಗ್ಗೆ ಭೀಕರ ಚಿಂತೆ ಕವಿಯನ್ನು ಕಾಡುತ್ತದೆ. ಅದಕ್ಕಾಗಿ ಮುಂಬರುವ ವಿನಾಶಕಾಲದ ಬಗ್ಗೆ ಪ್ರತಿಯೊಬ್ಬರೂ ಕಾಳಜಿ ವಹಿಸದಿದ್ದಲ್ಲಿ ಮೊದಲೇ ಬಡತನ, ನಿರುದ್ಯೋಗದಿಂದ ಬಳಲುತ್ತಿರುವ ನಮ್ಮ ಭಾರತವನ್ನು ಮತ್ತಷ್ಟು ವಿರೂಪಗೊಳಿಸುವುದು ಬೇಡ ಎಂಬ ಚಿಂತನೆ ಇವರದು.

---

**ಅಡಿ ಟಿಪ್ಪಣಿ : -**

೫. ಸಮಾಜ ಶಾಸ್ತ್ರದ ಮೂಲ ತತ್ವಗಳು ಬ್ಲಾಕ್-೪ ಪುಟ-೬೧ ಪ್ರಕಾಶಕರು: ಕ.ರಾ.ಮು.ವಿ -ಮೈಸೂರು-೨೦೦೦

ಇಪ್ಪತ್ತೊಂದನೇ ಶತಮಾನದಲ್ಲಿ ಹೊಸ ವೈಜ್ಞಾನಿಕ ಸಾಮಗ್ರಿಗಳು ಸೃಷ್ಟಿಗೊಂಡ ನಿರುದ್ಯೋಗ ಸಮನ್ವಯವನ್ನು ಇನ್ನಷ್ಟು ತೀವ್ರಗೊಳಿಸಿರುವುದನ್ನು ಕವಿ ನಿರ್ಭಯವಾಗಿ ಮುಂದಿಡುತ್ತಾನೆ. ಹಳೆಯ ಜ್ಞಾನ ಇದರಿಂದ ಮರೆಯಾಗಿ ಮಾನವ ಕಲ್ಯಾಣ ನಾಶವಾಗುವ ಭೀಕರತೆಯನ್ನು ತಿಳಿಸುತ್ತಾನೆ. ಅದು ಮರೆಯಲಾರದೆಂಬ ಹೇಳಿಕೆ ಇಲ್ಲಿದೆ.

"ಯಂತ್ರ ಯುಗದ ತಂತ್ರಜ್ಞಾನ
ಹೆಚ್ಚುತ್ತಿರುವ ಕಾಲಮಾನ-
ದಲ್ಲಿ ಹಳೆಯ ದೈವಿಜ್ಞಾನ
ಮರೆತು ಹೋಯಿತು ಪೆದ್ದಜಿಮ್ಮ" (ಅ.ನ.ಸು.ಪೆ- ೫೯) ಪು -೧೨

ಇಂದಿನ ಸಮಾಜದ ಸರ್ಕಾರದ ನೆಮ್ಮದಿ ಹಾಳು ಮಾಡುವಲ್ಲಿ ದಿನೇ ದಿನೇ ಯಶಸ್ಸು ಸಾಧಿಸುತ್ತಿರುವ ಆತಂಕವಾದಿ ತಮ್ಮ ಹೆಸರೇ ಸೂಚಿಸುವಂತೆ ಅವರ ವರ್ತನೆಯಾಗಿರುತ್ತದೆ. ಕಂಡಕಂಡಲ್ಲಿ ಆತಂಕವಾದಿಗಳು ಮುಗ್ಧ ಜನರ ಪ್ರಾಣಹರಣ ಮಾಡುವಲ್ಲಿ ಸಫಲವಾಗಿ ರಾಷ್ಟ್ರದ ನೆಮ್ಮದಿ ಕೆಡಿಸುತ್ತಾರೆ. ಅದಕ್ಕಾಗಿ ಸರ್ಕಾರವು ಎಷ್ಟೋ ಕಟ್ಟೆಚ್ಚರ ವಹಿಸಿದರೂ ಈ ಶತಮಾನದಲ್ಲಿ ಅವರ ವರ್ಚಸ್ಸು ಹೆಚ್ಚುತ್ತದೆ. ಪರಿಣಾಮವಾಗಿ ಇಂದು ಆದರ್ಶವೂ ಕುಗುತ್ತಲಿದೆ ಎಂಬ ಕವಿಯ ಕಳಕಳಿ ಕಾಣಿಸುತ್ತದೆ.

" ಆತಂಕವಾದುದಲ್ಲಿ ಉಗ್ರವಾದಿಗಳಲ್ಲಿ
ಮಾನವತೆ ಎಲ್ಲಿಹುದು ಎಂದೆನ್ನುತಿರುವಲ್ಲಿ
ಆತಂಕವೇ ಹೆಚ್ಚು ಆಗುತ್ತ ಸಾಗಿದಲ್ಲಿ
ಆದರ್ಶಗಳ ಕುಸಿತ ಹುಲಿಯ ಸಿದ್ದೇಶ್ವರಾ" (ಯು-೨೯೪) ಪು -೪೦

"ಆತಂಕವಾದದಲ್ಲಿ ಭಾರತಕ್ಕೆ ಬಳಲಿಸುವ
ಭಯ ಮೂಡಿ ಸುಡುಗಾಡು ಸೇರುವಂತಾಗಿರುವ
ಜೀವನದ ಪರಿ ನೆನೆದು ಭಯಭೀತವಾಗಿರುವ
ಜೀವನದ ಪಾಡೇನು? ಹುಲಿಯ ಸಿದ್ದೇಶ್ವರಾ" (ಯು-೧೪೪) ಪು -೨೩

ಈ ಆತಂಕವಾದದ ನಿರ್ಮಾಣಕ್ಕೆ ಇಂದಿನ ವೈಜ್ಞಾನಿಕವಾದ ಹಲವು ವಿಸ್ಫೋಟಕ ವಸ್ತುಗಳೇ ಕಾರಣವಾಗಿದ್ದು, ಸ್ವಾರ್ಥ ಅಂಧಾಭಿಮಾನಿಗಳಿಂದ ಮೈಮರೆತಿರುವ ಈ ಆತಂಕವಾದಿಗಳು ಇಡೀ ಜಗತ್ತನೇ ಇಂದು ಆತಂಕದ ಸ್ಥಿತಿಯಲ್ಲಿಟ್ಟಿರುವುದನ್ನು ಖೂಬಾರವರು ಬಯಲುಗೊಳಿಸುತ್ತಾರೆ. ಸುಗಮವಾದ ಬದುಕನ್ನು ಬದುಕುತ್ತಾ ಹಿಂದಿನ ಬದುಕು ಸುಂದರವಾಗಿತ್ತು. ಇಂದು ವಿಜ್ಞಾನ ಬೆಳೆದು ಎಲ್ಲೆಲ್ಲೂ ನಿರುದ್ಯೋಗ ಸೃಷ್ಟಿಸುವ ಚಿತ್ರವನ್ನು ಕಣ್ಮುಂದೆ ತಂದು ನಿಲ್ಲಿಸುತ್ತಾರೆ.

## * ಆಧ್ಯಾತ್ಮಿಕ ಚಿಂತನೆಗಳು

ಬಂಡೆಪ್ಪ ಖೂಬಾ ಅವರು ಚಿಂತನಶೀಲ ಹಾಗೂ ಸಂವೇದನಾಶೀಲ ಕವಿ. ಜೀವನದಲ್ಲಿಯ ಒಂದು ಚಿಕ್ಕ ಘಟನೆಯೂ ಕೂಡ ಅವರ ಚಿಂತನೆಯ ವ್ಯಾಪ್ತಿಯಿಂದ ಹೊರಗುಳಿಯುವುದಿಲ್ಲ. ಜೀವನ ಬರೀ ಸುಖದ ಸುಪ್ಪತ್ತಿಗೆಯಲ್ಲ ಅದರಲ್ಲಿ ದುಃಖಗಳು ತುಂಬಿರುತ್ತವೆ. ಈ ಸುಃಖ ದುಃಖಗಳ ಸಮ್ಮಿಲನವೇ ಈ ಜೀವನ ಅದಕ್ಕಾಗಿ –

"ಅತಿ ಸುಖವು ಹಿತವಲ್ಲ
ಅತಿ ದುಃಖ ಬೇಕಿಲ್ಲ
ಸುಖ ದುಃಖಗಳ ಮಿಲನ
ಹಗಲಿರುಳು ಜಗಕ್ಕೆಲ್ಲ" (ಐ.ಅ.ಪೌ–೧೨) ಪುಟ–೨೦

ಮಾನವನ ಜೀವನದ ಅತಿಯಾದ ಸುಖವು ಕೂಡ ಒಂದು ಹಂತದಲ್ಲಿ ಬೇಸರವಾಗಿ ದುಃಖವನ್ನು ಬಯಸುವುದು. ಅತಿಯಾದ ದುಃಖ ಬೇಸರವಾದಾಗ ಮನಸ್ಸು ಆಧ್ಯಾತ್ಮದತ್ತ ಹಂಬಲಿಸುವುದನ್ನು ಕವಿಯು ತಿಳಿಸುತ್ತಾರೆ.

ಬಂಡೆಪ್ಪ ಖೂಬಾರ ಕವಿತೆಗಳನ್ನು ಓದುವಾಗ 'ಪೆದ್ದಜಿಮ್ಮ' ಆಧ್ಯಾತ್ಮದ ಯೋಗಿಯಾಗಿ ಕಾಣುತ್ತಾನೆ. 'ಐವತ್ತೆಂಟರಲ್ಲಿ ಅನುತ್ತರನ ಪೌರುಷ' ದಲ್ಲಿ ನೀತಿಯ ನೆಲೆಗಟ್ಟಿನ ಮೇಲೆ ನಿಂತ ಕವನಗಳಾಗಿದ್ದು, ಕಂಡು ಬರುತ್ತವೆ. ಅವರ ಎಲ್ಲ ಕವನ ಸಂಕಲನಗಳಲ್ಲಿ ಆಧ್ಯಾತ್ಮಿಕ ವಿಚಾರಗಳು ಸಹೃದಯರ ಮನಸೂರೆಗೊಂಡು ಸನ್ಮಾರ್ಗದ ದಾರಿ ತುಳಿಯುವಂತೆ ಪ್ರೇರಣೆ ನೀಡುತ್ತವೆ. ಇದರಿಂದ ಕವಿಯಲ್ಲಿರುವ ಅಪಾರವಾದ ದೈವಿಶಕ್ತಿ ಕಾರಣ, ದೇವರ ಬಗ್ಗೆ ಇರುವ ನಂಬಿಕೆ ಎಂಬುದು ಸ್ಪಷ್ಟವಾಗುತ್ತದೆ. ದೇವರು ಇರುವುದೆಲ್ಲಿ? ಎಂಬುದನ್ನು ಜನರ ಮುಂದುಡುತ್ತಾನೆ. ಅಂತರಂಗ ಹಾಗೂ ಬಹಿರಂಗದ ಪ್ರಾಮುಖ್ಯತೆ ಯಾವುದು? ದೇವರನ್ನು ಕುರಿತು ವಿವಿಧ ಮಗ್ಗಲುಗಳಿಂದ ಕವಿತೆ ಮುಖಾಂತರ ಅಭಿವ್ಯಕ್ತಿ ಪಡಿಸುವುದು ತುಂಬ ಮನೋಜ್ಞವಾಗುತ್ತದೆ.

ಹುಟ್ಟು ಸ್ವಾಭಾವಿಕ ಸಾವು ಶಾಶ್ವತ ಎಂಬಂತೆ ಕೆಲವರು ಈ ಜಗಕ್ಕೆ ಪರಿಚಯವಾಗುವುದರಲ್ಲಿಯು ಅಪರಿಚಿತವಾಗುತ್ತಾರೆ. ಇದನ್ನು ನೀರ ಮೇಲಿನ ಗುಳ್ಳೆ ಎಂದು ಕೆಲವರು ಹೇಳಿದರೆ, ನಮ್ಮ ಬದುಕು ನಮ್ಮ ಕೈಯಲ್ಲಿದೆ ಎಂಬುವವರು ಬುದ್ಧಿಮಾಂಧ್ಯರು. ಇಂತಹ ಕುತೂಹಲಕಾರಿಯಾದ ಹುಟ್ಟು ಸಾವಿನ ಮಹಿಮೆಯನ್ನು ಅರಿಯಲು ಹೋಗಿ ಏನು ತೋಚದೆ ಹಿನ್ನುಗ್ಗುತ್ತಾರೆ ಎಂಬುದು ಕವಿಯ ಆಶಯ.

"ಹುಟ್ಟುತಲೆ ಸಾಯುವಾ ದುರ್ದೈವಿ ಕೆಲ ಜನರು
ಸಾಯಬೇಕೆಂದಿಷ್ಟು ಬಯಸಿ ಸಾಯದ ಜನರು
ಹುಟ್ಟು ಸಾವಿನ ಗುಟ್ಟು ಅರಿಯಬೇಕೆನುವವರು
ಬರಿ ಬಯಲು ಕಂಡಿಹರು ಹುಲಿಯಸಿದ್ದೇಶ್ವರಾ"

(ಯು–೧೫೭) ಪು –೨೫

ತಾಯಿಯ ಗರ್ಭದಿಂದ ಜನ್ಮ ತಳೆಯುವುದರೊಂದಿಗೆ ಮಗು ಅಂದಿನಿಂದ ಸಮಾಜದ ಸದಸ್ಯನಾಗುವುದಲ್ಲದೆ ಅದೇ ಬೆಳೆದು ನಾಡಿನ ಬಾಳಿನ ನಾಗರೀಕನಾಗುತ್ತಾನೆ. ಇಂತಹ ಮಗುವಿಗೆ ಪಾಲಕರು ಆಲಸ್ಯವೇ ಮಕ್ಕಳಿಗೆ ಆದರ್ಶವಾಗಬಾರದೆಂದು ಅರಿತು ಪೋಷಣೆ ಮಾಡಬೇಕಾಗಿ ಹೇಳುತ್ತಾರೆ.

"ನಾಳೆ ಮಾಡುವ ಕೆಲಸ ಇಂದೆ ಮಾಡುವುದೊಳಿತು
ಸೋಮಾರಿತನದಲ್ಲಿ ಎಲ್ಲಿ ಅಹಿತದ ಗುರುತು
ತುಂಬಿ ಕೊಂಡಿರುವಾಗ ಮಾನವತೆ ಎಚ್ಚತ್ತು
ಆಲಸ್ಯ ತೊರೆಯಲೈ ಹುಲಿಯಸಿದ್ದೇಶ್ವರಾ"

(ಯು–೨೨೫) ಪು –೫೧

ಈ ಜಿಮ್ಮ (ಕವಿ) ದೈವೀಶಕ್ತಿಯನ್ನು ನಂಬಿದವನಾಗಿದ್ದು, ಬುದ್ಧಿಯ ಹಿಡಿತಕ್ಕೆ ಮನಸ್ಸು ಬದ್ಧವಾಗಿರಬೇಕೆನ್ನುತ್ತಾನೆ. ಮನಸ್ಸಿನ ಹಿಡಿತದಲ್ಲಿ ಬುದ್ಧಿ ಇರಬಾರದು. ಅದರಿಂದ ಅಪಾಯವಾಗುತ್ತದೆ. ಎಂದು ಎಚ್ಚರಿಸುತ್ತಾನೆ.

"ಆತ್ಮ ಚಿಂತನೆಯಲಿ ತೊಡಗಿ
ಮನದ ದಾಸ್ಯದಿಂದ ಮುಕ್ತಿ
ಪಡೆದು ಸಿದ್ಧಿಮಾರ್ಗದಲ್ಲಿ
ನಡೆದು ತೋರು ಪೆದ್ದಜಿಮ್ಮ" (ಅ.ಸು.ಪೆ.ಜಿ.–೧೨) ಪು –೫

ಏಕೆಂದರೆ ಮನಸ್ಸಿನ ಮಾತು ಕೇಳಿದರೆ ಈ ಕೆಳಗೆ ಹೇಳಿದ ದುರಂತ ಸಂಭವಿಸಬಹುದು ಎಂಬುದು ಜಿಮ್ಮನ ಹೇಳಿಕೆ.

"ದುಷ್ಟ ವ್ಯಸನಗಳಲಿ ಸಿಲುಕಿ
ದೇಹಶಕ್ತಿ ಕುಂದಿ ಮನಸ್ಸು
ಶಕ್ತಿಹೀನನಾದ ಮೇಲೆ
ಬಾಳು ನಷ್ಟ ಪೆದ್ದ ಜಿಮ್ಮ"

(ಅ.ಸು.ಪೆ. –೬೮) ಪು –೬೮

ಅಲ್ಲದೆ ಮನಸ್ಸಿನ ಚಂಚಲತೆ ದುಂಬಿಯ ಹಾಗೆ ಅದಕ್ಕೆ ಕಡಿವಾಣ ಹಾಕಿದಾಗ ಮಾತ್ರ ಬಾಳು ಹಸನಾಗುತ್ತದೆ ಅಲ್ಲದೆ ಸದ್ಗತಿಯು ದೊರೆಯುತ್ತದೆ.

"ಮನದ ಚಂಚಲತೆಯನು
ತಡೆಯಲಾರದ ಹಾಗೆ
ಮಾಡಬಾರದ ಕೆಲಸ ಮಾಡುತ್ತ ಸಾಗುತ್ತ
ಮಾನವನ ಜೀವನದ
ಮೌಲ್ಯವದು ಕುಸಿಯುತ್ತ
ದಾನವತೆಯಲ್ಲಿ ಮುಳುಗಿ
ಕೇಡನ್ನೆ ಕಾಣುತಿಹ
ಮನದ ಚಂಚಲತೆಯನು ಕಡಿವಾಣದಲ್ಲಿರಿಸಿ
ಬಾಳು ಹಸನಾಗಿಸುವ
ಬಗೆಯನ್ನು ತೋರುತ್ತ
ಹಸನಾದ ದಾರಿಯಲಿ
ನಡೆದು ಸದ್ಗತಿಯನ್ನು
ಪಡೆಯಬೇಕೆಂದೆನುವ
ಸನ್ಮಾರ್ಗದಲ್ಲಿ ನಡೆಸಿ
ಕಾಪಾಡು ಮನುಕುಲವ ಹುಲಿಯ ಸಿದ್ದೇಶ್ವಗಾ" (ಶ.ವ.ಶ.೬೦) ಪು –೬೦

ಅದಕ್ಕಾಗಿ ಜನರಿಗೆ ಸೂಕ್ಷ್ಮವಾದ ಮನಸ್ಸನ್ನು ಸದಾ ಜಾಗೃತವಾಗಿಟ್ಟುಕೊಳ್ಳಲು ತಿಳಿಸಿ ಅದನ್ನು ತುಂಬ ಜಾಗರೂಕತೆಯಿಂದ ಕಾಪಾಡಬೇಕು. ಎಂದು ಕವಿಮಾತು ಹೇಳುತ್ತಾರೆ.

"ಬಾಳಬೇಕು ತಾಳಬೇಕು
ಮನಕೆ ಹರಿಯಗೊಡದ ಹಾಗೆ
ಹಿಡಿತದಲ್ಲಿ ಇರಿಸಿಕೊಂಡು
ಬಾಳಬೇಕು ಪೆದ್ದಜಿಮ್ಮ"

(ಅ.ನ.ಸು.ಪೆ.–೧೦೪) ಪು –೧೮

ಪ್ರತಿಯೊಬ್ಬರ ಮನಸ್ಸಿಗೆ ಹಿತ ಮತ್ತು ಅಹಿತದ ಎರಡು ಪಥಗಳುಂಟು ಸದಾಹಿತದ ಪಥಕ್ಕಾಗಿ ಶ್ರಮಿಸಬೇಕು ಎಂಬುದು ಸಂದೇಶ.

"ದೇಹದಲ್ಲಿ ಮನಸ್ಸು ಉಂಟು
ಮನಸಿಗೆರಡು ದಾರಿ ಉಂಟು
ಹಿತದ ಮಿತದ ದಾರಿಯಲ್ಲಿ
ನಡೆಸಬೇಕು ಪೆದ್ದ ಜಿಮ್ಮ"

(ಅ.ನ.ಸು.ಪೆ.–೧೦೬) ಪು –೧೮

ಇಂದು ಮನಸ್ಸಿನ ನೆಮ್ಮದಿ ಹಾಳುಮಾಡುವುದಕ್ಕೆ ಕಾಲಮಾನವು ಒಂದು ಕಾರಣ ಎಲ್ಲವನ್ನು ದುಡ್ಡಿನಿಂದ ಅಳೆಯುವ ಜಾಯಮಾನ ಬಂದುದರಿಂದ ಗುಣವು ಕಣ್ಮರೆಯಾಗುತ್ತಿರುವುದು ಕಳವಳಕಾರಿ ಅಂಶ. ಅಂದು ಗುಣ ಮುಖ್ಯವಾದರೆ ಇಂದು ಹಣಮುಖ್ಯ ಎಂಬಂತೆ ಮನುಷ್ಯ ಇದಕ್ಕೆ ಬಲಿಪಶುವಾಗುತ್ತಿರುವುದು ಅನಾರೋಗ್ಯಕರ ಬೆಳವಣಿಗೆ ತಾನೇ ಇದನ್ನು

"ಮೋಸ ಕಪಟ ವಂಚನೆಗಳ
ನಗ್ನ ನೃತ್ಯ ನೋಡುತಿರುವ
ಮನಕೆ ಶಾಂತಿ ನೆಮ್ಮದಿಗಳ
ಸುಳಿವು ಸಿಗದು ಪೆದ್ದ ಜಿಮ್ಮ"

(ಅ.ನ.ಸು.ಪೆ.–೧೭೯) ಪು –೨೯

ಎಂದು ಕಾವ್ಯ ತಿಳಿಸುವುದು ಮುಖ್ಯವಾದ ಆಲೋಚನೆ ಜೀವನವೆಂಬುದು ದೇವರು ಕೊಟ್ಟವರವೆಂದೇ ತಿಳಿದು ಪ್ರತಿಕ್ಷಣವು ಒಳ್ಳೆಯದನ್ನೇ ಅನುಸರಿಸುತ್ತ ಮುಂದೆ ಸಾಗಿದಾಗ ಮಾತ್ರ ಜೀವನಕ್ಕೆ ಸಾರ್ಥಕತೆ ಸಿಗುತ್ತದೆ. ಅದಕ್ಕಾಗಿ ಮನಸ್ಸಿನ ಚಂಚಲತೆ ದೂರವಾಗಬೇಕು. ಆಧ್ಯಾತ್ಮದ ಅನುಸಂಧಾನ ಗೈಯುತ್ತಿರುವ ಖೂಬಾ ಅವರಲ್ಲಿ ಈ ಎಳೆಗಳು ಹಲವಾರು ಕವನಗಳಲ್ಲಿ ಅಭಿವ್ಯಕ್ತವಾಗಿವೆ.

"ಮಾನವನಾಗಿ ಹುಟ್ಟಿದ ಮೇಲೆ
ಮಾನವನಾಗಿ ಬಾಳುತ ನೀನು
ಜೀವನವನು ಸಾರ್ಥಕತೆಯ ಕಡೆಗೆ
ದೂಡುವುದು ಕವಿ ಬೇಗನೆ ನೀನು"

(ಐ.ಅ.ಪೌ.೩.೨) ಪುಟ–೪೯

ಮನಸ್ಸಿನ ಸತ್ಯತೆಯನ್ನು ಕಂಡು ಹಿಡಿಯಲು ಆಳವಾಗಿ ಚಿಂತಿಸಿದಾಗ ಕವಿಗೆ ಮನಸ್ಸಿನ ಎರಡು ರೂಪಗಳು ಕಾಣಸಿಗುತ್ತವೆ.

"ಉಚಿತ ಕಾರ್ಯ ಮಾಡಿದಾಗ
ಮನಸ್ಸು ದೇವರೆನಿಸುತಿಹುದು
ಮಾಡಬಾರದನ್ನು ಮಾಡೆ
ಮನಸ್ಸು ರಕ್ಕಸಲ್ಲವೇನು?" (ಐ.ಅ.ಪೌ.–೨೧) ಪು –೫೦

ಕೊನೆಗೆ ಮನಸ್ಸಿನ ವಿವಿಧ ಮಜಲುಗಳನ್ನು ಬಿಚ್ಚಿ ತೋರಿಸಿದ ಕವಿ ಏನು ತೋಚದ ಹಾಗೆ ತಾನು ಏನೇ ಮಾಡಿದರೂ ಎಲ್ಲವನ್ನು ದೇವರ ಮೇಲೆ ಹಾಕುತ್ತಾನೆ. ನಾನು ಕೇವಲ ಸೂತ್ರ ಗೊಂಬೆಯಾಗಿದ್ದೇನೆಂದು ಹೇಳಿ ಜಾರಿಕೊಳ್ಳುತ್ತಾನೆ ಎನ್ನುತ್ತಾರೆ.

"ಸೂತ್ರಧಾರಿಯಾಗಿ ನಿಂತು
ಆಟ ಆಡಿಸುವನು ಅವನು
ಸೂತ್ರ ಗೊಂಬೆಯಾಗಿ ನಾನು
ಮನಸ್ಸಿನಂತೆ ನಟಿಸುತಿಹೆನು"

(ಐ.ಅ.ಪೌ.–೨೧) ಪು –೬೦

ಈ ಹಾರಾಟ ಏತಕ್ಕಾಗಿ? ಸ್ವಾರ್ಥಿಯಾಗಿ ತಾನೇ ಬದುಕಬೇಕೆಂಬುದಾಗಿ ಇನ್ನೊಬ್ಬರ ನಾಶ.

"ಜನಮನವನ್ನು ಸುಲಿಗೆಯ ಮಾಡುವುದು ಬೇಡ
ಬೇಡಾರವನು ತುಳಿದು ಬಿಡುವುದು
ಡಾರ್ವಿನ್ ಹೇಳಿದ ತತ್ವಕ್ಕೆ ಹೊಂದಿ
ಏನೋ ಹಾರುತಿದೆ ನೋಡಿದಿರಾ?" (ಅ.ಸು.ಪೆ.–೭) ಪು –೪೯

"ಏನೋ ಹಾರುತಿದೆ ನೋಡಿದಿರಾ"? ಎಂದು ನಮ್ಮೆಲ್ಲರನ್ನು ಪ್ರಶ್ನಿಸುವ ಕವಿಯ ಮಾತಿನಲ್ಲಿ ನಮ್ಮ ಆತ್ಮಗಳನ್ನು ನಾವೇ ಸಾಕ್ಷಿಯಾಗಿ ಹೇಳಬೇಕಾದ ಪ್ರಾಮಾಣಿಕತೆಗೆ ತೋರುಬೆರಳಾಗಿ ಹಾಗೆಯೇ ನಾವು ಆತ್ಮಸಾಕ್ಷಿಯಿಂದ ನೋಡಿಕೊಂಡಾಗ 'ಉನ್ನತ ಮೌಲ್ಯರಹಿತ ಬಣ್ಣ ಬದುಕು ಮನದಟ್ಟಾಗುತ್ತದೆ" ಇದರಿಂದ ದಿನೇ ದಿನೆ ಮೌಲ್ಯರಹಿತವಾಗುವುದು ದುಃಖದ ಸಂಗತಿ ಎಂಬುದು ಕವಿಯ ಆಶಯ.

"ಮಾನವನ ಮತಿಯಲ್ಲಿ ಗುರಿಯಲ್ಲಿ ಗತಿಯಲ್ಲಿ
ಆತ್ಮ ಚೇತನ ಬೆರೆತು ಬೆಳಕು ಕಾಣಲಿ ಅಲ್ಲಿ
ನಾವೆಲ್ಲರೊಂದೆನುವ ಭಾವ ಮಾಡುತ್ತಿರಲಿ
ನವ ಭವ್ಯ ಭಾರತದಿ ಹುಲಿಯ ಸಿದ್ದೇಶ್ವರಾ"

(ಯು–೪೦೮) ಪು ಟ–೭೧

ಆತ್ಮ ಚೇತನ ಬೆರೆತು ಬೆಳಕು ಕಾಣಲಿ ಎಂಬ ಹೊನಲು ಕವಿಗಿಲ್ಲಿದೆ. ಆತ್ಮವಿದ್ಯೆಯ ಸ್ವರೂಪವನ್ನು ಇದು ಹೇಳುತ್ತದೆ.

"ಜಗದ ಜೀವನದಾಟ ಜಗದೊಡೆಯನಿಗೆ ಗುರುತು
ಜೀವನದ ಹೋರಾಟ ನಮ್ಮ ಕಣ್ಣೆದುರಿಹುದು
ಹೋರಾಟದಲ್ಲಿ ಬಲಶಾಲಿ ಬದುಕುವನು
ಬಲಹೀನ ನಹಿಸುವನು ಇದುವೆ ಜೀವನದಾಟ
ಜೀವನದ ಜಾಲದಲಿ ಸಿಲುಕಿ ಒದ್ದಾಡುತಿಹ
ಮತಿಹೀನ ನಾನಾದೆ ಹುಲಿಯಸಿದ್ದೇಶ್ವರಾ"

(ಶ.ವ.ಶ.–೧೩) ಪು ಟ–೧೩

ಇದನ್ನೆ ಮುಂದುವರೆದು ಹೀಗೆ ಹೇಳುತ್ತಾರೆ.

"ಜೀವನದ ಜೂಜಾಟ
ಜೀವಿಸುವನಿಗೆ ಕಾಟ
ಜೀವನ ರಹಸ್ಯಮಯ
ಜಾಲದಲ್ಲಿಹ ಮಾಟ
ಒಡಲ ಸೂಕ್ಷ್ಮದ ಕೂಟ
ಮನುಕುಲದ ಹಿರಿನೋಟ
ಶೂನ್ಯದಿಂದಲೆ ಬಂದು
ಶೂನ್ಯದಲ್ಲಡಗುತಿಹ
ಜೀವನದ ನೆಲೆ ಬೆಲೆಗೆ
ಸೂತ್ರಧಾರನು ಯಾರು?
ತಿಳಿಯದಾಗಿಹ ತೊಡಕು ಹುಲಿಯಸಿದ್ದೇಶ್ವರಾ"

(ಶ.ವ.ಶ.–೩೧) ಪು ಟ–೩೧

ಜೀವನ ಎಂಬ ಅಮರ ನಾಟಕದಲ್ಲಿ ಕೋಟಿಗಟ್ಟಲೆ ನಟರು ಬಂದು ತಮ್ಮ ತಮ್ಮ ಪಾತ್ರಧರಿಸಿ ನಟಿಸಿ ಹೋಗುವವರು. ಈ ನಾಟಕದ ಗುಟ್ಟು ತಿಳಿಯಲಾಗದೆ ಅದು ನನ್ನದು ಇದು ನನ್ನದು ಎಂದು ವ್ಯಾಮೋಹಕ್ಕೆ ಸಿಲುಕಿ ಬಳಲುವರು ಕೊನೆಗೆ ಸಾವಿನ ಭಯವು ಅರಿವಾದೊಡನೆ ಅಳುಕುವರು.

"ಬರುವಾಗ ಜೊತೆಯಲ್ಲಿ ಏನನ್ನು ತಂದಿಲ್ಲ.
ಹೋಗುವಾಗಲು ಜೊತೆಗೆ ಏನೂ ಬರುವು ದಿಲ್ಲ.

ಮಧ್ಯದಲ್ಲಿಯ ಬದುಕು ಅದು ಬೇಕು ಇದು ಬೇಕು
ನನ್ನದದು ನನ್ನದಿದು
ಎಂಬ ವ್ಯಾಮೋಹದಲ್ಲಿ
ಸಿಲುಕಿ ತೊಳಲಾಡುವುದು
ಜ್ಞಾನೋದಯದ ನೋಟ ಜೀವನದಿ ಕಾಣದಿರೆ
ಜೀವನದಿ ಕಾಣದಿರೆ
ತೊಳಲಿ ಬಳಲುವ ಕಾಟ
ಸಾವಿನಂಜಿಕೆಯಿಂದ
ಬೆಚ್ಚಿ ಬೀಳುವ ಮನದ
ಚಾಂಚಲ್ಯದಲ್ಲಿ ಕಂಡ
ಅಳು ನಗೆಯ ಸುಳಿದಾಟ
ಶೂನ್ಯಸಂಪಾದನೆಯ
ಹೆಗ್ಗುರಿಯ ಜೀವನಕೆ
ಜೀವನದ ಮರ್ಮವನು ಧರ್ಮವನು ಕರ್ಮವನು
ತಿಳಿಸು ಜೀವನದಾತ ಹುಲಿಯಸಿದ್ದೇಶ್ವರಾ''  (ಶ.ವ.ಶ–೬೯) ಪುಟ–೬೯

ಆಧ್ಯಾತ್ಮದ ಅನುಸಂಧಾನಗೈಯುತ್ತಿರುವ ಖೂಬಾರವರು ಈಶ್ವರೀಯ ವಿಶ್ವವಿದ್ಯಾಲಯದ ವಿದ್ಯಾರ್ಥಿ ಆತ್ಮ, ಪರಮಾತ್ಮ ಸ್ವರೂಪ ತಿಳಿದವರು. ಅಲ್ಲಿರುವ ಮರುಜನ್ಮದ ಬಗ್ಗೆ ನಂಬಿಕೆ, ಸಫಲ ಜೀವನದ ರೀಶಿ ಕಂಡ, ಕೇಳಿದವರು ಅವುಗಳನ್ನು ಹೀಗೆ ವಿವರಿಸುತ್ತಾರೆ.

"ನಿನ್ನ ಬದುಕು ನೀನು ಹಾಳು
ಆಗದಂತೆ ನೋಡಿಕೊಂಡು
ಮನುಜ ಜನ್ಮ ಸಫಲ ಆಗು
ವಂತೆ ಮಾಡು ಪೆದ್ದಜಿಮ್ಮ'' (ಅ.ನ.ಸು.ಪೆ.–೨೦೧) ಪು –೩೨

ಎಂಬುದು ಅನುಸರಿಸಲೇಬೇಕಾಗಿರುವ ಹಾದಿ ತಾನೇ?

ಸಮುದ್ರದ ನೀರಿನಲ್ಲಿ ಆಳ ಅಗಲ ಅನನ್ಯ ಅನಂತವಾದುದು. ಅದರೊಳಗೆ ಏನೇನಿದೆ ಎಂಬುದು ಖಚಿತವಾಗಿ ಹೇಳಲಾಗದು. ಹಾಗೆಯೇ ಸಂಸಾರ ಎಂಬ ಸಾಗರದ ಆಳದಲ್ಲಿರುವುದನ್ನು ಪತ್ತೆ ಹಚ್ಚುವುದು ಕಷ್ಟಸಾಧ್ಯ. ಒಂದು ವೇಳೆ ಅದರ ಆಳ ಅರಿತಿದ್ದರೂ ಇನ್ನೊಬ್ಬರಿಗೆ ತಿಳಿಸಿಹೇಳಲಾಗದು ಎಂಬ ಕವಿಯು ವಾಸ್ತವಿಕ ಬದುಕಿನ ಮರ್ಮವನ್ನು ಚಿತ್ರಿಸಿದ್ದಾರೆ.

"ಸಂಸಾರ ಸಾಗರವು
ಅತಿ ಆಳಹೊಂದಿಹುದು
ತಳದಲ್ಲಿ ಏನಿಹುದು
ಎಂದು ತಿಳಿದವರಿಲ್ಲ
ತಿಳಿದವರು ಇದ್ದರೂ
ತಿಳಿಯದವರಿಗೆ ಅವರು
ತಿಳಿಹೇಳುವಂತಿಲ್ಲ
ಸಂಸಾರ ಸಾಗರದಿ
ತೇಲುತ್ತ ಮುಳುಗುತ್ತ
ಹೋಗುತಿಹ ಕಾರ್ಯದಲಿ
ವಿಘ್ನ ಬರದಂತಿರಿಸು ಹುಲಿಯಸಿದ್ದೇಶ್ವರಾ" (ಶ.ವ.ಶ.–೫) ಪು ಟ–೫

ದೇವರನ್ನು ನಂಬುವ ಜಿಮ್ಮನು ಅವನು ಒಲಿಯುತ್ತಾನೆ ಎಂದು ಹೇಳುತ್ತಾನೆ. ಶುದ್ಧ ಮನಸ್ಸಿನಿಂದ ಕೇಳಿದಾಗ ದೇವರು ವರವನ್ನು ಕೊಡಪನಂತೆ.

"ಶುದ್ಧಚಿತ್ತದಿಂದ ಕೇಳಿ
ದವರ ಮನದ ಅಶೆಯನ್ನು
ಹರನು ಪೂರ್ತಿಗೊಳಿಸದಿರನು
ನಂಬಿ ಬಾಳು ಪೆದ್ದಜಿಮ್ಮ" (ಅ.ನ.ಸು.ಪೆ.–೪೯)ಪು –೧೧

"ಅದನ್ನು ಇನ್ನಷ್ಟು ಸ್ಪಷ್ಟಪಡಿಸಲು
ದೇವರಲ್ಲ ಎನ್ನಬೇಡ
ದೇವನಿರುವ ಪರಿಯ ತಿಳಿದು
ನಿನ್ನ ನೀನು ಕಂಡುಕೊಂಡು
ಸಾಗಿ ಮುಂದೆ ಪೆದ್ದಜಿಮ್ಮ" (ಅ.ನ.ಸು.ಪೆ.–೫೮) ಪು –೧೨

ಇಂದಿನ ಸಮಾಜದಲ್ಲಿ ಯಾರಿಗೆ ಯಾರು ಇಲ್ಲ. ತಾನು ಒಳ್ಳೆಯವನಾಗಿದ್ದರೆ ಎಲ್ಲರು ನನ್ನವರು ಒಂದು ವೇಳೆ ನಾವು ಕೆಟ್ಟರೆ ಯಾವ ಸಂಬಂಧಗಳು ಜೊತೆಯಾಗುವುದಿಲ್ಲ ವೆಂದು ಹೇಳಲೂ ಆದರ್ಶ ಜೀವನದ ರೀತಿಯನ್ನು ಕವಿ ತಿಳಿಸುತ್ತಾನೆ.

"ಯಾರಿಗಾಗಿ ಯಾರು ಇಲ್ಲ
ನಿನ್ನ ನೀನು ತಿಳಿಯಬಲ್ಲ
ಜ್ಞಾನ ಜ್ಯೋತಿಯಲ್ಲಿ ನೀನು
ಲೀನನಾಗು ಪೆದ್ದ ಜಿಮ್ಮ" (ಅ.ನ.ಸು. ಪೆ.–೧೧೭)ಪು –೨೦

ಎಂಬುದು ಕವಿಯು ಸರಾಗವಾಗಿ ಹೇಳುತ್ತಾರೆ,

"ಎಲ್ಲ ನನ್ನದೆಂದು ತಿಳಿದು
ನನ್ನದೇನು ಇಲ್ಲ ಎಂಬ
ತ್ಯಾಗ ಭಾವ ಬೆಳೆದ ಹೊರತು
ಕ್ಷೇಮವಿಲ್ಲ ಪೆದ್ದಜಿಮ್ಮ" (ಅ.ನ.ಸು.ಪೆ.–೧೧೮)ಪು –೨೨

ಎಂದು ಎಚ್ಚರಿಸುವಲ್ಲಿ ಆಧ್ಯಾತ್ಮಿಕ ಚಿಂತನೆಯಿದೆ.

"ಶುನ್ಯ ಸಂಪಾದನೆಯ
ಗುರಿಯು ಹೊಂದಿದೆ ಜೀವ
ಜೀವನದ ಮೋಹದಲಿ
ಧನಕನಕ ಜಾಲದಲಿ
ಗುರಿಯಿಂದ ದೂರಾಗಿ
ಅಜ್ಞಾನದಲಿ ಮುಳುಗಿ
ಕೊನೆಯ ಉಸಿರಿನವರೆಗೆ
ಶೂನ್ಯಸಂಪಾದನೆಯ
ಗರಿಮೆಯನು ಹಿರಿಮೆಯನು
ತಿಳಿಯದಂತಾಗಿರುವ
ಮಾನವನ ಜೀವನದ
ಹೋರಾಟದಲ್ಲಿರುವ
ಸ್ಥಿತಿಯನ್ನು ಗತಿಯನ್ನು
ಅಳು ನಗೆಯ ಸುಳಿಯನ್ನು
ಕಂಡು ಬಳಲಿದೆ ಮನವು ಹುಲಿಸಿದ್ದೇಶ್ವರಾ"

(ಶ.ವ.ಶ–೮೦) ಪು –೮೦

ಜೀವನದ ಗುರಿ ಶೂನ್ಯ ಸಂಪಾದನೆ. ಶೂನ್ಯವೆಂಬುದು ಬದುಲು, ಸತ್ಯ, ಸತ್ಯದರ್ಶನ ಮರೆತು ಜನರು ಧನ–ಕನಕದ ಸಂಪಾದನೆಗೆ ತೊಡಗಿರುವುದನ್ನು, ಗುರಿ ಮರೆತಿರುವುದನ್ನು ಇದರಿಂದಾಗುವ ಪರಿಣಾಮವನ್ನು ಕವಿ ಇಲ್ಲಿ ಚಿಂತಿಸುತ್ತಾನೆ.

ಇಂದಿನ ಏಳು ಬೀಳು ಹಿಗ್ಗು–ಕುಗ್ಗಿನ ಬದುಕಿಗೆ ಹರನ ಕರುಣೆಬೇಕು ಎಂಬುದು ಕವಿಯ ನಂಬಿಕೆ.

"ಏಳು ಬೀಳು ಹಿಗ್ಗು ಕುಗ್ಗು
ಕೂಡಿಕೊಂಡು ನಡೆವಗತಿಯು
ಜೀವನಕ್ಕೆ ಹರನ ಕರುಣೆ
ಎಂದು ತಿಳಿಯೊ ಪೆದ್ದಜಿಮ್ಮ" (ಅ.ನ.ಸು.ಪೆ.–೨೭೪)ಪು –೪೩

ಇಲ್ಲಿ ಯಾರಿಗೆ ಯಾರು ಮೂಲರಲ್ಲ. ಇಲ್ಲಿ ಬರುವಾಗ ಮತ್ತು ಇಲ್ಲಿಂದ ಹೋಗುವಾಗ ಒಂಟಿಯಾಗಿ ಹೋಗಬೇಕು. ಆದರೆ ಹೋಗುವ ಮೊದಲು ಸಫಲ ಜೀವನ ನಡೆಸಬೇಕು.

"ಯಾರಿಗೂ ಯಾರಿಲ್ಲ ಬರುವಾಗ ಏಕಾಕಿ
ಹೋಗುವಾಗಲು ಮತ್ತೆ ಹೋಗುವುದು ಏಕಾಕಿ
ಮಧ್ಯದಲ್ಲಿಹ ಜಾತ್ರೆ ಸುಖ ದುಃಖಗಳ ಚುಳುಕಿ
ನಗೆಬೇಕೊ ಅಳಬೇಕೊ ಹುಲಿಯಸಿದ್ದೇಶ್ವರಾ"

(ಯು-೧೦೭)ಪು -೧೮

ಆದರೆ ಮಾನವನು ಸರ್ಪದ ಬಾಯಿಯಲ್ಲಿ ಸಿಕ್ಕಿಬಿದ್ದಿರುವ ಕಪ್ಪೆಯು ತನ್ನ ಮುಂದೆ ಹಾರುವ ನೋಣವ ಹಿಡಿಯಲೆತ್ನಿಸಿದಂತೆ ಮಾನವನು ಸಾವಿನ ದವಡೆಯಲ್ಲಿ ಸಿಕ್ಕಿಬದ್ದಿರುವುದನ್ನು ಮರೆತು ಸಾವನ್ನೇ ಜಯಸಿದಂತೆ ಗರ್ವದಲ್ಲಿ ಮರೆಯುವುದನ್ನು ಅವರ ಮಾತುಗಳಲ್ಲಿಯೇ ಕೇಳಬೇಕು.

"ಸಾವಿನಾ ದವಡೆಯಲಿ ಸಿಕ್ಕಿ ಬಿದ್ದಿಹ ಮನುಜ
ಸಾವನ್ನೆಗೆದ್ದಂತೆ ದರ್ಪದಲಿ ಮರೆದು ನಿಜ
ಅಸ್ತಿತ್ವವನೆ ಮರೆತು ಮರದಾಡುತಿಹ ಮನುಜ
ವರ್ತಿಸುವ ಪರಿ ನೋಡು ಹುಲಿಯಸಿದ್ದೇಶ್ವರಾ"

(ಯು-೧೦೮)

ಆದಕ್ಕಾಗಿ ಕವಿಯು ಜೀವನದ ನಿಜವಾದ ಅರ್ಥವನ್ನು ಅರಿತುಕೊಂಡು ಅವನ್ನೆ ಉನ್ನತ ಮಟ್ಟಕ್ಕೆ ಒಯ್ಯಲು ಆದ್ಯಾತ್ಮಿಕಕ್ಕೆ ಶರಣಾಗಬೇಕಾದುದನ್ನು, ಹಾಗೆ ಆ ಪ್ರೇಮದಲ್ಲಿ ಬೆರೆತಿರುವ ಕಾವ್ಯನಂದರ ನೋಟವನ್ನು ತೋರುತ್ತಾರೆ.

" ಜೀವನವೆಂದರೆ ಪ್ರಥಮ ಕೂಟ
ಪ್ರೇಮ ರಹಿತ ಜೀವನ ಗೋಳಾಟ
ಆಧ್ಯಾತ್ಮಿಕದಾ ಉನ್ನತ ಪ್ರೇಮದಿ
ಬೆರೆತಿದೆ ಕಾವ್ಯಾನಂದರ ನೋಟ"

(ಐ.ಅ.ಪೌ.-೪೦)ಪು -೧೧

ಏಕೆಂದರೆ ಪುನರ್‌ಜನ್ಮದ ಗುರುತು ಯಾರಿಗೂ ತಿಳಿದಿಲ್ಲ. ಅದಕ್ಕಾಗಿ ನಮಗೆ ದೊರೆತ ಈ ಜನ್ಮ ಸಫಲಗೊಳಿಸಿಕೊಳ್ಳಬೇಕು. ಅಲ್ಲದೆ ಯಾವುದೇ ಒಳ್ಳೆಯ ಕೆಲಸ ಮಾಡಬೇಕೆಂದು ನಿರ್ಣಯ ತೆಗೆದುಕೊಂಡರೆ ಅದನ್ನು ಆದಷ್ಟು ಬೇಗ ಮಾಡಬೇಕು.

"ಆದಕ್ಕೆಂದೆ ಮಾನವನು ಮಾಡಬೇಕೆಂದುದನು
ಈ ಜನ್ಮದಲಿ ಮಾಡಿ ಮುಗಿಸಬೇಕೆನ್ನುವನು
ಯಾವ ಮತಿಗೆ ನಾನು ನಂಬಬೇಕೆಂಬುದನು
ತಿಳಿಸಿ ಕೊಡುನೀ ದೇವ ಹುಲಿಯಸಿದ್ದೇಶ್ವರಾ "

(ಯು-೪೮೯) ಪು -೭೩

ಎನ್ನುವಲ್ಲಿ ಜೀವನದ ಅಸ್ಥಿರತೆಯ ಚಿಂತನೆಯನ್ನು ಮುಂದಿಡುತ್ತಾರೆ.

" ಸಾವು ಬರುವವರೆಗೆ ಮನುಜ
ಬಾಳಬೇಕು ಜಾಣ್ಮೆಯಿಂದ
ಜಾಣತನವೆ ನರನಲಿರುವ
ದೈವಿಶಕ್ತಿ ಪೆದ್ದಜಿಮ್ಮ"

(ಅ.ನ.ಸು.ಪೆ.-೬೨)ಪು -೧೨

ದೇವರು ಬಹಳ ಬುದ್ಧಿ ಜೀವಿ. ಏಕೆಂದರೆ ಯಾವುದೇ ಫಲಕ್ಕೆ ತಾನು ಹೊಣೆಗಾರನಾಗುವುದಿಲ್ಲ. ಕೊನೆಗೆ ನಮ್ಮ ತಲೆಯ ಮೇಲೆ ಗೋಬೆಕೂರಿಸುತ್ತಾನೆ. 'ಮಾಡಿದುಣ್ಣೋ ಮಹಾರಾಯ' ಎಂಬಂತೆ.

" ಬಲು ಜಾಣ ನೀನೆಂದು ನನ್ನ ಮತಿ ಹೇಳುವುದು
ಹೊಣೆ ನಮ್ಮ ಮೇಲಿರಿಸಿ ಸುತ್ತು ಸುತ್ತಿಸುತಿಹುದು
ಅವರವರ ಕರ್ಮಕ್ಕೆ ಫಲವು ನಿಶ್ಚಿಯಿಸಿಹುದು
ನಿನ್ನ ಜಾಣ್ಮೆಯ ಗುರುತು ಹುಲಿಯಸಿದ್ದೇಶ್ವರಾ"

(ಯು-೫೩೮) ಪು -೮೦

ಮಾನವನು ತಾನು ಸ್ವಲ್ಪ ಶುದ್ಧ ನಡತೆಯಿಂದ ನಡೆದುಕೊಂಡರೆ ಅಂತ್ಯವು ಅಷ್ಟೇ ಶುದ್ಧತೆಯನ್ನು ಕಾಣಸಿಗುತ್ತದೆ. ಒಂದು ವೇಳೆ ಅಶುದ್ಧ, ಕಲ್ಮಷದಿಂದ ಜೀವನ ಸಾಗಿಸಿದರೆ, ಅದರಿಂದ ಯಾವುದೋ ಒಂದು ದುರಂತ ಸಂಭವಿಸಬಹುದು.

ಶರಣರು 'ಮರಣವೇ ಮಹಾನವಮಿ' ಎಂದು ನಂಬಿದಲ್ಲದೆ ಅದರ ಅರ್ಥವನ್ನು ತಿಳಿಸಿದರು. ಇಂದಿಗೂ ಜನರು ಸಾವು ಸತ್ಯವಿದೆ. ಯಾರಿಂದಲೂ ತಪ್ಪಿಸಲು ಸಾಧ್ಯವಿಲ್ಲ ಎಂಬುದನ್ನು ಮರೆತು ಸುಳ್ಳು ಬದುಕಿಗಾಗಿ ಹೋರಾಡುತ್ತಿದ್ದಾರೆ ಎಂದುದನ್ನು

"ಎಲ್ಲ ಸುಳ್ಳಾಗಿಹುದು
ಸತ್ಯ ಸಾವಾಗಿರುಹುದು
ಸಾವನ್ನೇ ಮರೆಯುತ್ತ

ಜೀವ ಸಾಗುತ್ತಿಹುದು
ಕೊನೆಯ ಗಳಿಗೆಯವರೆಗೆ
ತನ್ನತನವನು ಮರೆದು
ಸಾಯು ವಾಗೆಚ್ಚರವು
ಮೂಡಿ ಬರುವುದು ಮತ್ತೆ
ಬದುಕಿನಲಿ ಸಾವನ್ನು
ಸಾಕ್ಷಾತ ರೂಪದಲಿ
ಕಾಣುವಾ ಹುನ್ನಾರ
ಶೂನ್ಯ ಸಂಪಾದನೆಯು
ಎಂದು ಶರಣರು ತಿಳಿಸಿ
ಹೇಳಿರುವ ನಿಜ ಜ್ಞಾನ
ಮಾಡಿದರೆ ಮಾನವನ
ಮಾನವತೆ ಬೆಳೆಯುತ್ತ
ಶೂನ್ಯ ಸಂಪಾದನೆಯ
ಗುರಿಯನ್ನು ಸ್ಮರಿಸುತ್ತ
ಸುಜ್ಞಾನ ಮೂಡುವುದು ಹುಲಿಯಸಿದ್ದೇಶ್ವರಾ''

(ಶ.ವ.ಶ-೮೧)ಪು -೮

ಈ ರೀತಿ ಹೇಳಿ, ಸಾವಿನ ಸತ್ಯದರ್ಶನ ಮಾಡಿಸುತ್ತಾರೆ.

''ಹೊಳಪು ಥಳಪು ಗಳಲಿಮುಳುಗಿ
ಬಾಹ್ಯ ಜಗದ ಕ್ಷಣಿಕ ಸುಖಿಕೆ
ಅಂತರಂಗದಾತ್ಮ ಜ್ಞಾನ
ಕುಂದು ತಿಹುದು ಪೆದ್ದಜಿಮ್ಮ''

(ಅ.ನ.ಸು.ಪೆ.-೧೪೨)ಪು -೨೪

ಈ ಆತ್ಮದಲ್ಲಿ ಪರಮಾತ್ಮನ ನೆಲೆಸಿರುವುದರಿಂದ ಎಲ್ಲರು ಪರರ ಆತ್ಮದಲ್ಲಿ ತನ ಆತ್ಮ ಕಾಣುವ ಪ್ರಯತ್ನಮಾಡಿದ್ದರೆ, ಶುದ್ಧ ನಡತೆಯ ನಿಜವಾದ ಅರ್ಥ ದೊರೆಯುವುದು ಎಂಬುದು ಕವಿಯ ಅನುಭವ.

''ಶುದ್ಧ ನಡತೆ ಎಂದರೇನು?
ಸುತ್ತಮುತ್ತಲಿರುವ ಜನರ
ಆತ್ಮದಲ್ಲಿ ನಿನ್ನ ಆತ್ಮ
ಕಾಣಬೇಕು ಪೆದ್ದ ಜಿಮ್ಮ''                (ಅ.ನ.ಸು.ಪೆ.-೨೨೬)ಪು -೨೬

ಶುದ್ಧಾತ್ಮದ ಸ್ವರೂಪವನ್ನು ಇಲ್ಲಿ ತಿಳಿಸುವರು ಆದರೆ ಆತ್ಮವನ್ನು ದೇಹದಿಂದ ಬೇರ್ಪಡಿಸಿ ತೋರಿಸಬಹುದೇ? ಸಾಧ್ಯವಿಲ್ಲ. ಅದಕ್ಕಾಗಿಯೇ ಈ ಆತ್ಮಕ್ಕೆ ಶುದ್ಧತೆ ಕಾಪಾಡಿಕೊಳ್ಳುವ ರೀತಿಯನ್ನು ಮಾತ್ರ ತಿಳಿಸುತ್ತಾರೆ.

"ತನುವಿನಿಂದ ಆತ್ಮವನು
ಬೇರೆ ನೆಲೆಮಲಿರಿಸಿ ನೀನು
ಆತ್ಮವನ್ನು ಕಂಡ ಗುರುತು
ಹೇಳಬಹುದೆ ಪೆದ್ದಜಿಮ್ಮ" (ಅ.ನ.ಸು.ಪೆ.-೨೩೪)ಪು -೩೭

ತನುವಿನಲ್ಲಿರುವ ಆತ್ಮವನ್ನು ಬೇರ್ಪಡಿಸಿ ಕಾಣಲಾಗದ ಪರಿಯನ್ನು ಇಲ್ಲಿ ಹೇಳುತ್ತಾರೆ. ಖೂಬಾರವರು ಏಕದೇವೋಪಾಸನೆಗೆ ಹೆಚ್ಚು ಮಹತ್ವ ಕೊಡುವರು. ಇವನು ದೇಹಮಂದಿರದಲ್ಲಿರುವನೇ ಹೊರತು ಬೇರೆಯಿಲ್ಲ ಎನ್ನುತ್ತಾ

" ದೇವನೊಬ್ಬ ನಾಮ ಹಲವು
ಹೊರಗೆ ದೇವರಿಲ್ಲ ನಮ್ಮ
ದೇಹ ಮಂದಿರದಲ್ಲಿ ಇರುವ
ನವನೆ ದೇವ ಪೆದ್ದಜಿಮ್ಮ"
(ಅ.ನ.ಸು.ಪೆ.-೬೫)ಪು -೧೩

ಎನ್ನುವರು. 'ತನ್ನ ಬಿಟ್ಟು ದೇವರಿಲ್ಲ ಮಣ್ಣು ಬಿಟ್ಟು ಮಡಿಕೆಯಿಲ್ಲ' ಎಂಬಂತಿದೆ ಇವರ ಈ ನುಡಿ ದೇವರನ್ನು ನಂಬಿದವರು ಕೆಟ್ಟಿಲ್ಲವೆಂದು ಅವರು ನಿರ್ಭಯವಾಗಿ ಹೇಳುತ್ತಾರೆ.

"ಇಲ್ಲ ಎಂದರೆ ಇಲ್ಲ
ಅಹುದು ಎಂದರೆ ಅಹುದು
ಎನ್ನುವಂತಾಯ್ತಲ್ಲ
ನಿನ್ನ ಇರುವಿಕೆ ಗುರುತು
ನಂಬಿಕೆಟ್ಟವರಿಲ್ಲ
ನಂಬದೆ ಕೆಟ್ಟವರು ಕೆಡಲಿ
ಎಂದು ಹೇಳಿದ ಮಾತು
ಸರಿಯೆನಿಸುತಿದೆಯಲ್ಲ
ನಿನ್ನ ನಂಬಿದ ನನಗೆ ಹುಲಿಯ ಸಿದ್ದೇಶ್ವರಾ"
(ಶ.ವ.ಶ.-೨೬)ಪು -೨೬

ಇಂದಿನ ಯುಗಮಾನದಲ್ಲಿ ಸಂಪೂರ್ಣವಾಗಿ ದೈವವನ್ನೇ ನಂಬುವುದು ಮುರ್ಖತನ. ಏಕೆಂದರೆ ಮಾನವನು ಪ್ರಯತ್ನವಾದಿ ಎಂಬುದಕ್ಕೆ ಧಕ್ಕೆಯುಂಟಾಗುತ್ತದೆ. ಆದ್ದರಿಂದ ದೈವಲಿಖಿತ ಅಥವಾ ಹಣೆಬರಹವು. ತಮ್ಮ ತಮ್ಮ ಕೈಯಲ್ಲಿರುವುದು ಎಂಬುದು ಬಹು ಮುಖ್ಯ ಮಾತು.

"ದೈವವನು ನಂಬುತ್ತ
ಕುಳಿತವನ ದೈವದಲಿ
ದೈನ್ಯತೆಯ ನೆಲೆಗೊಂಡು
ಹೇಡಿಯಾಗುವನುವನು
ತನ್ನ ದೈವದ ಲಿಖಿತ
ತನ್ನ ಕೈಯಲ್ಲಿಹುದು
ಇದನರಿತು ಬಾಳಿದವ
ದೈವದಾಟಿಕೆ ನಂಬಿ
ಮರುಳಾಗದಂತಿಹದು,
ಹುಲಿಯಸಿದ್ದೇಶ್ವರಾ" (ಶ.ವ.ಶ.–೪)ಪು–೪

ದೇವರಲ್ಲಿ ಅಪಾರ ನಂಬಿಕೆಯುಳ್ಳ ಕವಿ ಖೂಬಾ ಅವರಿಗೆ ಇಂದು ದೇವರು ಕಾಣದಂತಾಗುತ್ತಾನೆ. ಅವರ ನಂಬಿಕೆ ಹುಸಿಯಾಗುತ್ತದೆ ಎಂದು ಭಾಸವಾಗುತ್ತದೆ ಎನಿಸುತ್ತದೆ. ಏಕೆಂದರೆ ದಿನೇ ದಿನೇ ಹೆಚ್ಚುತಿರುವ ಬಡವರ ಜೀವನದ ಕಷ್ಟ ಸಂಕಷ್ಟಗಳು ಹಾಗೂ ಅವರ ದಾರಿದ್ರ್ಯ ಹತ್ತಾರು ಸಮಸ್ಯೆಗಳು ಪರಿಹಾರ ಕಾಣದೆ ಪರದಾಡುವ ಸ್ಥಿತಿ ಚಿಂತಾಜನಕವಾಗಿದೆ. ಅದಕ್ಕಾಗಿ ದೇವರನ್ನೇ ಪ್ರಶ್ನಿಸುವ ಎದೆಗಾರಿಕೆ ಅವರಲ್ಲಿ ಕಾಣುತ್ತದೆ.

"ಜೀವನದ ತಾಪದಲಿ ಬೆಂದವನು ನೀನಲ್ಲ
ಬೆಂದವರ ಬೇಗೆಯನು ದೂರ ಮಾಡುವುದಿಲ್ಲ
ಕಲ್ಲಾಗಿ ಕುಳಿತಿರುವ ನಿನ್ನ ನಂಬಿದೆನಲ್ಲ
ನಂಬುಗೆಯು ಸುಳ್ಳಾಯ್ತೆ? ಹುಲಿಯಸಿದ್ದೇಶ್ವರಾ"
(ಯು–೪೫) ಪು –೯

ಕವಿಯು ನಿಜವಾದ ದೇವರು ಎಲ್ಲಿರುವುದು ಎಂಬ ಹುಡುಕಾಟದಲ್ಲಿ ಬಳಲಿ ಕೊನೆಗೆ ಒಂದು ನಿರ್ಣಯಕ್ಕೆ ಬರುತ್ತಾನೆ. ಉತ್ತರ ಕಂಡುಕೊಳ್ಳುತ್ತಾನೆ.

"ಗರ್ಭ ಗುಡಿಯ ಮಧ್ಯದಲ್ಲಿ
ಮೂರ್ತಿಇಹುದು ದೇವರೆಲ್ಲಿ?
ಎಂದು ನಾನು ಯೋಚಿಸುತ್ತ

ಹೊರಗೆ ಬಂದು ಸುತ್ತಮುತ್ತ
ಶಾಂತ ಚಿತ್ತದಿಂದ ಮನದಿ
ಯೋಚಿಸಿದೆನು ಸರಳತನದಿ
ಹರಕು ಬಟ್ಟೆ ತಿರುಕನಲ್ಲಿ
ಹುಡುಗಿ ಅಡಗಿ ಕುಳಿತನಿಲ್ಲ.'' (ಐ.ಅ.ಪೌ.–೧)ಪು –೨೫

ಎನ್ನಲಾಗಿದೆ. ನಿಜ ದೈವದ ಕಲ್ಪನೆಯೂ ಇಲ್ಲಿ ಉದಾತ್ತವಾಗಿರುವುದು ಗಮನಾರ್ಹ ಅಂಶ. ಪೆದ್ದಜಿಮ್ಮನು ನಿಜವಾದ ದೇವರನ್ನು ಕಾಣಬಯಸುವುದಾದರೆ ಅದನ್ನು ದೀನದಲಿತರಲ್ಲಿ, ಬಡವರಲ್ಲಿ ಕಾಣಲು ಹೇಳುತ್ತಾನೆ.

''ದೀನ ದಲಿತ ಬಡವನಲ್ಲಿ
ದೇವರನ್ನು ಕಾಣಬೇಕು
ದೈವಿಶಕ್ತಿ ಮುನಿದ ಮೇಲೆ
ಸರ್ವನಾಶ ಪೆದ್ದ ಜಿಮ್ಮ''

(ಅ.ನ.ಸು.ಪೆ.–೨೪೧) ಪು –೩೯

ಹೀಗಾಗಿ ದೀನ ದಲಿತರಿಗೆ ದೀನನಾಗಿ ನೋಡಬೇಕು, ದಲಿತರ ಸೇವೆ ಗೈಯಬೇಕು. ದೇವರು ದೀನದಲಿತರೆಂದು ತಿಳಿದು ಸಮಾಜದಲ್ಲಿ ಜೀವಿಸಬೇಕು ಎಂಬ ಸಮಾನತೆಯ ಕೂಗು ಎಲ್ಲರು ಕೇಳಿ ಪಾಲಿಸಬೇಕಾದುದು ಇಂದು ಅತ್ಯಗತ್ಯ.

ಶ್ರೇಷ್ಟ ಜೀವಿಯಾದ ಮನುಷ್ಯನಿಗೆ ಅರಿವಿದ್ದರೂ ಎಲ್ಲ ಅರಿತಿದ್ದರೂ 'ನಾನು' ನನ್ನದು ಎಂದು ಹಪಹಪಿಸುತ್ತಿರುವುದನ್ನು ಆದ್ಯಾತ್ಮ ಜೀವಿಯಾಗಿ ಕವಿ ವಿವರಿಸುತ್ತಾರೆ.

''ದೇಹ ಧರಿಸಿ ಬಂದುದಾಯ್ತು
ದೇಹ ಬಿಟ್ಟು ಹೋಗಬೇಕು
ಹೋದ ಮೇಲೆ ಉಳಿಯಿತೇನು
ಅದುವೆ ಮುಖ್ಯ ಪೆದ್ದಜಿಮ್ಮ'' (ಅ.ನ.ಸು.ಪೆ –೨೯೭)ಪು –೪೬

ಇದು ದಾಸರ 'ಮಾನವ ಜನ್ಮ ದೊಡ್ಡದು' ಎಂಬ ಹೇಳಿಕೆಯಂತ್ತಿದ್ದರೂ ಸಹ, ಮನುಷ್ಯನು ಇಲ್ಲಿ ಕೀರ್ತಿಯನ್ನು ಉಳಿಸಿಹೋಗಬೇಕೆಂಬುದಕ್ಕೆ ಒತ್ತು ನೀಡಿದ್ದನ್ನು ಕಾಣುತ್ತೇವೆ. ಇಳೆಗೆ ಬರುವಾಗ ಬೆತ್ತಲೆ ಹೋಗುವಾಗಲು ಬೆತ್ತಲೆ ಜೊತೆಗೆ ಕೊಂಡುಯ್ಯುವುದು ಏನಿದೆ ಎಂದು ಹೇಳುವಲ್ಲಿ, ಹಳೆಯ ರಾಗ ಹಾಡಿದಂತೆ ಅನಿಸಿದರೂ ಸಹ ಹುಟ್ಟಿನೊಂದಿಗೆ ಸಾವು ಜನಿಸಿರುವುದರಿಂದ ಅದನ್ನು ತಿಳಿದು ನಾವು ದೇಹ ತ್ಯಾಗ ಮಾಡಿದಾಗ ನಮ್ಮ ನೆನಪುಗಳು ಶಾಶ್ವತವಾಗಿ ಉಳಿಯುವಂತೆಯಿರಲು ನಾವು ಶ್ರಮಿಸಬೇಕು ಎನ್ನುವಾಗ ಮತ್ತೆ ಅದನ್ನೇ ಕೇಳಿ ಕೇಳಿ ಎಚ್ಚರಗೊಳ್ಳಲೀ ಎಂಬುದೇ ಕವಿಯ ಆಶಯವಾಗಿರುವಂತಿದೆ.

ದಿನನಿತ್ಯದ ಬದುಕಿನಲ್ಲಿ ನಾನಾತರಹದ ಸ್ವಾರ್ಥ ಜನರಿರುತ್ತಾರೆ. ಆದ್ಯಾಗೂ ನಾವು ಯಾವು ದಕ್ಕೂ ಬಲಿಯಾಗದೆ 'ಕೆಸರಲ್ಲಿ ಕಮಲ ಅರಳಿದಂತೆ' ಕೆಟ್ಟವರಲ್ಲಿಯೇ ಒಳ್ಳೆಯವರನ್ನು ಆಯ್ಕೆ ಮಾಡುವ ಜಾಣತನವನ್ನು ಉಪಯೋಗಿಸಿಕೊಂಡು ಜೀವಿಸಬೇಕು ಎಂದು ಕವಿ ಹೇಳುವ ಬುದ್ಧಿ ಮಾತು.

'ದಂತ ಪಂಕ್ತಿವ ಮಧ್ಯದಲ್ಲಿ
ಜಾಣತನದಿ ವಾಸಿಸಿರುವ
ಜಿಪ್ಹೆಯಂತೆ ಕಟುಕ ಜುಗದಿ
ಬಾಳಬೇಕು ಪೆದ್ದಜಿಮ್ಮ'' (ಅ.ನ.ಸು.ಪೆ-೮೫)ಪು -೧೬

ಇನ್ನೊಬ್ಬರ ಒಳಿತಲ್ಲಿ ತನ್ನ ಒಳತೆಂದು ಭಾಃಸಬೇಕು. ನಮ್ಮ ನಡೆನುಡಿಯಲ್ಲಿ ಶುದ್ಧತೆ ಕಾಪಾಡಿಕೊಂಡು, ನಮಗೆ ಕೇಡನ್ನು ಬಯಃಸುವವರಿಗೆ ಒಳಿತಾಗಲೆಂದು ಉದಾರ ಮನೋಭಾವನೆಯನ್ನು ನಿಜ ಜೀವನದಲ್ಲಿ ಅಳವಡಿಸಿಕೊಂಡಿಲ್ಲ. ದೇವರು ನಮಗೆ ಒಳ್ಳೆಯದನ್ನು ಮಾಡುತ್ತಾನೆ. ಇಂತಹ ನಿಸ್ವಾರ್ಥ ಭಾವನೆಯನ್ನು ಎಲ್ಲರು ಮೈಗೂಡಿಸಿಕೊಳ್ಳಲು ಹೇಳುವು ದರಿಂದ ಕವಿಯ ಮನಸ್ಸಿನ ವಿಶಾಲತೆ ಇಲ್ಲಿ ವ್ಯಕ್ತವಾಗುತ್ತದೆ.

'' ನಿನ್ನ ದಾರಿಯಲ್ಲಿ ಕಲ್ಲು
ಮುಳ್ಳು ಚೆಲ್ಲುವವರ ದಾರಿ
ಯಲ್ಲಿ ಹೂಗಳನ್ನು ಚೆಲ್ಲಿ
ಪು ನೀತನಾಗು ಪೆದ್ದಜಿಮ್ಮ'' (ಅ.ನ.ಸು.ಪೆ -೮೭)ಪು -೧೬

ಜೀವನದಲ್ಲಿ ಬರುವ ದುಃಖ-ದುಮ್ಮಾನೆಗಳಲ್ಲಿ ಪಳಗಿದವನೆಂತು ನಿನ್ನಲ್ಲಿ ಬಡವರ ಬಡತನದ ನೋವನ್ನು ದೂರ ಮಾಡುವವರಿಲ್ಲ. ದೇವರಿದ್ದಾನೆಂದು ನಿನ್ನನ್ನು ನಂಬಿದೆನಲ್ಲ ನನ್ನ ನಂಬಿಕೆ ಸುಳ್ಳೇನು? ಎಂದು ಕವಿ ದೇವರಿಗೆ ಪ್ರಶ್ನಿಸುವಲ್ಲಿ ಅವನ ಅಂತರಂಗದ ಸಿಟ್ಟು ಹೊರಡುತ್ತದೆ.

''ಸುಖಬರಲಿ ದುಃಖ ಬರಲಿ ಸಮಭಾವ ಆಗಿರಲಿ
ಎರಡರಾ ಮಿಲನದಲಿ ಜೀವ ಸಾಗುತ್ತಿರಲಿ
ಬಡತನವು ಸಿರಿತನವು ನಿನ್ನಲ್ಲಿ ಅಡಗಿರಲಿ
ಎರಡರಲಿ ನೀನಿಲ್ಲ ಹುಲಿಯಸಿದ್ದೇಶ್ವರಾ'' (ಯು-೫೮೬) ಪು -೮೬

ಇಲ್ಲಿ ಬಡವರ ದೈನ್ಯಸ್ಥಿತಿಯ ಬಗೆಗೆ ಅವರಿಗಿರುವ ವೈಜ್ಞಾನಿಕ ನಿಲುವು ಕಾಣುತ್ತದೆ.

" ಜೀವನದ ತಾಪದಲಿ ಬೆಂದವನು ನೀನಲ್ಲ
ಬೇದವರ ಬೆಗೆಯನು ದೂರ ಮಾಡುವು ದಿಲ್ಲ
ಕಲ್ಲಾಗಿ ಕುಳಿತಿರುವ ನಿನ್ನ ನಂಬದೆನಲ್ಲ
ನಂಬುಗೆಯ ಸುಳ್ಳಾಯು ಹುಲಿಯಸಿದ್ದೇಶ್ವರಾ''          (ಯು–೪೫ ) ಪು –೯

ಕವಿಯ ಸಮಾಜದಲ್ಲಿನ ಆಗುಹೋಗುಗಳನ್ನು ಕಣ್ಣಾರೆ ಕಂಡು, ಸಮಾಜದಲ್ಲಿನ ಅಸಮಾನತೆಯನ್ನು ತೊರೆಯಲು ಬಹಳ ಶ್ರಮಿಸಬೇಕಾಗಿದೆ ಎಂದು ಜನತೆಗೆ ಅರಿವನ್ನುಂಟು ಮಾಡುತ್ತಾನೆ.

ಸಂಸಾರೆಂಬುದು 'ಅರಿತವರಿಗೆ ಹತ್ತಿಗಿಂತ ಹಗುರವಾಗಿದ್ದರೆ, ಅರಿಯದವರಿಗೆ ಬೆಟ್ಟಕ್ಕಿಂತ ಭಾರವಾಗಿ ಕಾಣುತ್ತದೆ. ಕೆಲವರಿಗೆ ಸುಖದ ಸುಪ್ಪತ್ತಿಗೆಯಾಗಿ ಕಂಡರೆ, ಕೆಲವರಿಗೆ ಮುಳ್ಳಿನ ಹಾಸಿಗೆಯಾಗಿ ಕಾಣುತ್ತದೆ. ನಿಜವಾಗಿ ಅರಿತರೆ ಮಾನವನ ಶರೀರವು ನಶ್ವರವಾಗಿದೆ. ದಾಸರ ವಾಣಿ 'ನೀರ ಮೇಲಿನ ಗುಳ್ಳೆಯಂತೆ' ಈ ಜೀವನ ಎಂಬುದು ಬಂಡೆಪ್ಪನವರು, ನಿರುಪಾಣೆ ಎನಿಸುತ್ತದೆ.

"ಬಲುವಿಚಿತ್ರ ಬಾಳು ಕೆಲವರಿಗೆ ಇದುಗೋಳು
ಸುಖವಾಗಿ ಕಾಣುವು ದು ಕೆಲವರಿಗೆ ಈ ಬಾಳು
ನೀರ ಮೇಲಿನ ಗುಳ್ಳೆ ತಿಳಿದವರಿಗೀ ಬಾಳು
ಅಚ್ಚರಿಯನಿಸುತಿಹುದು ಹುಲಿಯಸಿದ್ದೇಶ್ವರಾ''  (ಯು–೧೦೬) ಪು –೧೮

ಬೌದ್ಧ ಧರ್ಮದ ಸ್ಥಾಪಕನಾದ ಗೌತಮ ಬುದ್ಧನು ಹೇಳಿದ ದಿವ್ಯ ತತ್ವಗಳು ಇಂದಿನ ಜನ ರಲ್ಲಿ ಎಷ್ಟುಮಟ್ಟಿಗೆ ಅನಾಚರಣೆಗೊಂಡಿವೆ ಎಂಬುದು ಬೇರೆ ರೀತಿಯಲ್ಲಿ ತಿಳಿಸುತ್ತಾರೆ. ಮೂಢ ನಂಬಿಕೆ, ಸಂಪ್ರಾದಾಯಗಳಿಂದ ಜನರನ್ನು ಹೊರತರಲು ಬುದ್ಧನು ಪಟ್ಟ ಕಷ್ಟ ಶಬ್ಧಾತೀತ, ಜನರ ಕಲ್ಯಾಣಕ್ಕಾಗಿ ಜೀವನವನ್ನೇ ಮುಡುಪಾಗಿಟ್ಟಿದ್ದು ಬುದ್ಧನ ದಿವ್ಯತತ್ವಗಳು ಇಂದು ಮರೆಯಾಗಿರುವು ದನ್ನು ಕವಿಯು ವ್ಯಗಾರ್ಥದಲ್ಲಿ ಹೇಳುತ್ತಿದ್ದಾನೆ. ಅದನ್ನು ಗಮನಿಸಿ.

"ಬುದ್ಧಂ ಶರಣಂ ಗಚ್ಛಾಮಿ
ಧಮ್ಮಂ ಶರಣಂ ಗಚ್ಛಾಮಿ
ಸಂಘಂ ಶರಣಂ ಗಚ್ಛಾಮಿ''          (ಐ.ಅ.ಪೌ.–೨೯)ಪು –೪೬

ಇದು ವಾಸ್ತವಿಕತೆಯ ಎಂಥ ನೈಜ ಚಿತ್ರ? ಬೇರೆ ವಿವರಣೆ ಇದಕ್ಕೆ ಬೇಕಿಲ್ಲ ಅಲ್ಲವೆ?

ಒಟ್ಟಿನಲ್ಲಿ ಖೂಬಾರವರ ಈ ಚಿಂತನೆಯು ಹಲವು ನೆಲೆಗಳನ್ನೊಳಗೊಂಡಿದ್ದು, ಜೀವನದ ಒಟ್ಟು ರೀತಿಯನ್ನು ಹಾಗೂ ಸೃಷ್ಟಿಯ ಸಂದರ್ಭವನ್ನು ಆಧಾರವಾಗಿಟ್ಟುಕೊಂಡು ವಿವರಣೆಗೊಂಡಿರುವು ದನ್ನು ಇಲ್ಲಿ ವಿಶ್ಲೇಷಿಸಿ ನೋಡಬಹುದು.

## ಅನುವಾದಕರಾಗಿ ಬಂಡೆಪ್ಪ ಖೂಬಾ

ಶ್ರೀ ಬಂಡೆಪ್ಪ ಖೂಬಾ ಅವರು ಬೀದರ ಜಿಲ್ಲೆಯ ಅಪರೂಪದ ವಿದ್ವಾಂಸ. ಹಿಂದೀ, ಕನ್ನಡ ಭಾಷೆಗಳೆರಡರಲ್ಲೂ ಸಮಾನ ಪ್ರತಿಭೆ ಹೊಂದಿರುವ ವ್ಯಕ್ತಿ. ಈ ಎರಡೂ ಭಾಷೆಗಳ ನಡುವಿನ ಸಂಪರ್ಕ ಸೇತುವೆಯಾಗಿ ಅವರು ಮಾಡಿದ ಅನುವಾದ ಕಾರ್ಯ ಗಮನಾರ್ಹವಾದುದು.

ಇವರು ಬೀದರ ಜಿಲ್ಲೆಯ ಹೆಸರಾಂತ ಕವಿ ಹಾಗೂ ಬರಹಗಾರರೆನಿಸಿದಂತೆ, ಇವರು ಪ್ರಸಿದ್ಧರಾಗಿದ್ದುದು. ತಮ್ಮ ಅನುವಾದ ಕಾರ್ಯದಿಂದ ಶ್ರೇಷ್ಠ ಅನುವಾದಕರಾಗಿ ಒಬ್ಬ ಸೃಜನಶೀಲ ಬರಹಗಾರನು ಎಂಬುದನ್ನು ನಾವಿಲ್ಲಿ ಗುರುತಿಸಬಹುದು.

'ಅನುವಾದವಿಲ್ಲದ ಸಾಹಿತ್ಯ ಯಾವುದೂ ಇಲ್ಲ' ಎಂಬ ಮಾತು ಈ ಸಂದರ್ಭದಲ್ಲಿ ನೆನಪಿಸಬಹುದು, ಅನುವಾದವು ಅತ್ಯಗತ್ಯ ಆದರೆ ಅನುವಾದ ಯಾವ ವರ್ಗಕ್ಕೆ ಸೇರಿಸಬೇಕೆಂಬ ಗೊಂದಲ ಉಂಟಾಗುತ್ತದೆ. ಅನುವಾದವು ಸಹ ಸೃಜನಶೀಲತೆಯಾಗಿದೆ. ಅನುವಾದವು ತನ್ನ ವ್ಯಾಪ್ತಿಯನ್ನು ಹೆಚ್ಚಿಸಿಕೊಂಡಿದೆ. ಹಲವು ವಿವಾದಗಳ ಮಧ್ಯೆಯೂ ಅದು ಗಟ್ಟಿತನ ಉಳಿಸಿಕೊಂಡು ಬಂದಿರುವುದನ್ನು ಅರಿಯಬಹುದು. ಇದಕ್ಕೆ ಮುಖ್ಯ ಕಾರಣ ಮೂಲ ಲೇಖಕ ಒಂದೇ ಸಲ ರಚನೆಯಲ್ಲಿ ಸೃಜನಶೀಲ ಗುಣ ಹೊಂದಿದ್ದರೆ, ಅನುವಾದಕನು ಕೃತಿ ಓದುವಾಗಲೂ, ಅನುವಾದ ಮಾಡುವಾಗಲೂ, ಅಲ್ಲದೆ ಪ್ರತಿಯೊಂದು ಶಬ್ಧ ರಚನೆಯಲ್ಲೂ ಸೃಜನಶೀಲತೆಯನ್ನು ಉಳಿಸಿಕೊಳ್ಳಬೇಕಾಗುತ್ತದೆ. ಅಂದರೆ ಅನುವಾದಕನ ಅನುವಾದದ ಅನುಭಾವವಾಗುತ್ತದೆ ಎನ್ನಬಹುದು. ಹೀಗಾಗಿ ಇಂದು ನಮಗೆ ಅನುವಾದಕ ಅತ್ಯವಶ್ಯಕವಾಗುತ್ತಾನೆ.

ಕನ್ನಡದ ಪ್ರಮುಖ ಕೃತಿಗಳಾದ ಪಂಪನ 'ಆದಿಪುರಾಣ', ನಾಗಚಂದ್ರನ 'ಚರಿತ್ರಾತ್ಮಕ ಪುರಾಣ' ಬಾಣನ ಕಾದಂಬರಿ ಬಸಪ್ಪ ಶಾಸ್ತ್ರಿಗಳ 'ಶಾಕುಂತಲಾ' ಹೊಸಗನ್ನಡ ಬಿ.ಎಂ.ಶ್ರೀ ಅವರ 'ಇಂಗ್ಲೀಷ್ ಗೀತೆಗಳು' ಗುಲ್ವಾಡಿ ಅವರ 'ಇಂದಿರಾ' ಕಾದಂಬರಿ, ಮುಂತಾದವುಗಳನ್ನು ಗಮನಿಸಿದರೆ ಅವೆಲ್ಲವೂ ಅನುವಾದ ಸಾಹಿತ್ಯದ ಒಂದು ಪ್ರಕಾರದ ಪ್ರಮುಖ ಕೃತಿಗಳಾಗಿ ನಿಲುತ್ತವೆ.

ಕನ್ನಡ ಆರಂಭದ ಸಾಹಿತ್ಯ ಹೆಚ್ಚು ಕಡಿಮೆ ಅನುವಾದ ರೂಪದಲ್ಲಿ ಕಾಣಿಸಿಕೊಂಡಿರುವುದನ್ನು ನಾವು ಒಪ್ಪಬೇಕಾಗಿದೆ. ಪಂಪ, ರನ್ನ, ಪೊನ್ನ, ನಾಗವರ್ಮರ

ಕೃತಿಗಳಲ್ಲಿ ಅನುವಾದದ ಅಂಶಿಕತೆಯೇ ಪ್ರಧಾನವಾಗಿದ್ದು, ಮೂಲ ವಸ್ತುವಿಗೆ ಇವರು ಸಮಕಾಲೀನತೆಯನ್ನು ಬೆರೆಸಿ ಸೃಜನಗೊಳಿಸಿರುವುದನ್ನು ಅಲ್ಲಗಳೆಯಲಾಗದು. ಇದು ಒಂದು ದೃಷ್ಟಿಯಿಂದ ಕನ್ನಡ ಸಾಹಿತ್ಯದ ವ್ಯಾಪಕತೆಯನ್ನು ಹೆಚ್ಚಿಸಿತೆಂದೇ ಹೇಳಬಹುದು. ಆದರೆ ನಂತರದ ಕಾಲದಲ್ಲಿ ಸುಮಾರು ೮-೯ ಶತಮಾನಗಳ ಕಾಲ ಅನುವಾದದ ದೃಷ್ಟಿಯಿಂದ ಬರಯೆನಿಸಿತು, ಹೊಸಗನ್ನಡದಲ್ಲಿ ಮತ್ತೆ ಇದಕ್ಕೆ ಜೀವ ತುಂಬಿದ ಅನೇಕ ಅನುವಾದಕರು ನಮ್ಮಲ್ಲಿ ಕಾಣಸಿಗುತ್ತಾರೆ. ಅಂಥವರಲ್ಲಿ ಬಂಡೆಪ್ಪ ಖೂಬಾ ಅವರು ಪ್ರಮುಖರು. ಹೈದ್ರಾಬಾದ ಕರ್ನಾಟಕವು ಹೊಸಗನ್ನಡ ಸಾಹಿತ್ಯದಲ್ಲಿ ಗಣನೀಯ ಪ್ರಮಾಣದ ಸಾಧನೆಯನ್ನು ಗೈಯಲಿಲ್ಲ. ಸಿದ್ದಯ್ಯ ಪುರಾಣಿಕ, ಶಾಂತರಸರು, ಶಿವಶರಣ ಜವಳಿ ಪಾಟೀಲ, ಪ್ರೊ. ವಸಂತ ಕುಷ್ಟಗಿ ಚನ್ನಣ್ಣ ವಾಲಿಕಾರ, ಅಲ್ಲಮಪ್ರಭು ಬೆಟ್ಟದೊರ, ಗೀತಾ ನಾಗಭೂಷಣರಂತಹ ಕೆಲವರು ಸೃಜನ ಸಾಹಿತ್ಯದಲ್ಲಿ ತೊಡಗಿಕೊಂಡು ಸಾಹಿತ್ಯ ಸೃಷ್ಟಿಸಿದರು. ಆದರೆ ಅನುವಾದದಲ್ಲಿ ಮಾತ್ರ ಶ್ರೀ ಬಾಲಚಂದ್ರ ಜಯಶೆಟ್ಟಿಯವರನ್ನು ಬಿಟ್ಟರೆ ಅನ್ಯ ಹೆಸರುಗಳು ಈ ಭಾಗದಲ್ಲಿ ಪ್ರಧಾನವಾಗಿ ಕಾಣಲಿಲ್ಲ. ಅಂತಹ ಸಮಯದಲ್ಲಿ ಹಿಂದಿ-ಕನ್ನಡ ಎರಡೂ ಭಾಷೆಗಳಲ್ಲಿ ಪಾಂಡಿತ್ಯ ಹೊಂದಿದ್ದ ಖೂಬಾರವರು ಹಿಂದೀ ಸಾಹಿತ್ಯದಲ್ಲಿ ಪ್ರಸಿದ್ಧವಾದ ಲೇಖಕರ ಕೆಲವು ಕಥೆಗಳನ್ನು ಕನ್ನಡಕ್ಕೆ ಅನುವಾದ ಮಾಡಿ ಪುಸ್ತಕ ಪ್ರಕಟಿಸಿದ್ದುದು ಅತಿ ಮುಖ್ಯವಾದ ಸಂಗತಿ ಎನ್ನಬಹುದು.

ಹೈದ್ರಾಬಾದ ಕರ್ನಾಟಕ ಪ್ರದೇಶ ಹಲವಾರು ಆಡಳಿತಗಾರರ ಆಳ್ವಿಕೆಗೆ ಒಳಪಟ್ಟಿದಲ್ಲದೆ ಆರು ನೂರು ವರ್ಷಗಳಕಾಲ ನಿಜಾಮನ ಆಳ್ವಿಕೆಗೆ ಒಳಪಟ್ಟಿದ್ದರಿಂದ ಇಂಗ್ಲೀಷ್, ಉರ್ದು, ಮರಾಠಿ ಭಾಷೆಗಳ ಸಂಪರ್ಕ ಹೆಚ್ಚಾಗಿತ್ತು. ಕರ್ನಾಟಕದ ಯಾವುದೇ ಭಾಗದಲ್ಲೂ ದೊರೆಯದ ಭಾಷೆಗಳ ಸಂಪರ್ಕ ಹೈದ್ರಾಬಾದ ಕರ್ನಾಟಕಕ್ಕೆ ದೊರಕಿತು. ಇದರ ಸದುಪಯೋಗ ಪಡಿಸಿಕೊಂಡ ಖೂಬಾರವರು ಅನುವಾದಕ್ಕೆ ಮನಸ್ಸು ಮಾಡಿದ್ದು, ಈ ಭಾಗದ ಸಾಹಿತ್ಯಕ್ಕೆ ಪ್ರಾಮುಖ್ಯತೆ ನೀಡುವ ವಿಷಯ ಎನ್ನಬಹುದು. ಇವರು ಅನುವಾದವನ್ನು ಎರಡು ರೀತಿಯಲ್ಲಿ ಮಾಡಿದ್ದಾರೆ. ಹಿಂದಿ ಭಾಷೆಯಲ್ಲಿ ಪ್ರಸಿದ್ಧವಾದ ಕಥೆಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಹಾಗೂ ಕೆಲವು ಕನ್ನಡ ಕೃತಿಗಳನ್ನು ಹಿಂದೀ ಭಾಷೆಗೆ ಅನುವಾದಿಸಿದ್ದಾರೆ. ಕನ್ನಡ ಸಾಹಿತ್ಯದ ಕಂಪನ್ನು ಅನ್ಯ ಭಾಷೆಯಲ್ಲಿ ಹರಡಿಸಿದವರು ಒಂದು ಪ್ರಕಾರದವರಾದರೆ, ಬೇರೆ ಬೇರೆ ಭಾಷೆಗಳ ಸಾಹಿತ್ಯದ ಪರಿಮಳವನ್ನು ಸಿರಿಗನ್ನಡಕ್ಕೆ ತಂದ ಅನುವಾದಕರು ಎರಡನೇ ಪ್ರಕಾರದವರು. ಇಲ್ಲಿ ಆಯಾ ಭಾಷೆಯ ಶ್ರೀಮಂತಿಕೆಯೊಂದಿಗೆ ಕನ್ನಡ ಭಾಷೆಯ ಸಮೃದ್ಧಿಯನ್ನು ಹೆಚ್ಚಿಸಿರುವುದು ವಿಶೇಷವೆನಿಸುತ್ತದೆ. ಇಲ್ಲಿಯವರೆಗೆ ಅನುವಾದ ಸಾಹಿತ್ಯವನ್ನು ರಚಿಸಿರುವ ಇಂಥವರ ಕುರಿತು ಸಮಗ್ರವಾದ ಅಧ್ಯಯನ ನಡೆಯದೇ ಇರುವುದು ಗಮನೀಯ ಅಂಶವಾಗಿದೆ. ಅಲ್ಲದೆ ಅನುವಾದಗೊಳ್ಳುತ್ತಿರುವ ಸಾಹಿತ್ಯಕೂ ಈಗ ವಿಶೇಷ ಪ್ರಶಸ್ತಿ, ಪುರಸ್ಕಾರಗಳು ಹೆಚ್ಚಿನ ರೀತಿಯಲ್ಲಿ ಸಿಗದೇ ಇರುವುದರಿಂದಲೂ ಈ ಕಡೆಗೆ ಅನುವಾದಕರ ಗಮನವೂ ಅಷ್ಟಕಷ್ಟೇ ಇದ್ದಿರುತ್ತದೆ ಎನ್ನಬೇಕಾಗುತ್ತದೆ. ಆದರೂ ಹಲವಾರು ಜನ ಸಾಹಿತಿಗಳು ಯಾವುದೇ ಪ್ರೋತ್ಸಾಹ ಪ್ರೇರಣೆಗಳು ಇರದಿದ್ದರೂ ಸಹ ತಮ್ಮ ಪಾಡಿಗೆ ತಾವು ಒದಿಕೊಂಡು

ತಾವು ಕಂಡ ಅನ್ಯ ಭಾಷೆಯಲ್ಲಿಯ ಸಾಹಿತ್ಯದ ರಸಾನುಭವವನ್ನು ಮೌನವಾಗಿಯೇ ಅನುವಾದ ಮಾಡಿದ ಉದಾಹರಣೆಗಳನ್ನು ಮರೆಯುವಂತಿಲ್ಲ. ಉತ್ತರ ಕರ್ನಾಟಕದಲ್ಲಿ ಇಂಥಹರೆಂದರೆ, ಡಾ. ಕೆ. ಮುದ್ದಣ್ಣ, ಶಾಂತರಸ, ಡಾ. ಪಂಚಾಕ್ಷರಿ ಹಿರೇಮಠ, ದತ್ತಾತ್ರೇಯ ರಾವ್ ಹೇರೂರು, ಎಂ. ಜೀವನ್, ಎಂ. ದಸ್ತಗೀರ, ಚಂದ್ರಕಾಂತ ಕುಸನೂರು, ಪ್ರೊ. ಬಾಲಚಂದ್ರ ಜಯಶೆಟ್ಟಿ, ಪ್ರೊ. ಆರ್.ಕೆ. ಹುಡುಗಿ, ಡಾ. ಕಾಶಿನಾಥ ಅಂಬುಲಗೆ, ಡಾ. ವಿಜಯ ತೆಲಂಗ್, ಡಾ. ವಿಜಯ ಗೂತ್ತಲ, ಡಾ. ತೇಜಸ್ವಿ ಕಟ್ಟಿಮನಿ, ಇಟಗಿ ಈರಣ್ಣ, ರೇವಣಸಿದ್ದಯ್ಯ, ವಿರೇಂದ್ರ ಸಿಂಪಿ, ಡಾ. ಪಿ.ಎಸ್. ಶಂಕರ್, ಕುಂ. ವೀರಭದ್ರಪ್ಪ ಮುಂತಾದವರ ಸಾಲಿನಲ್ಲಿ ಎದ್ದು ಕಾಣುತ್ತಿರುವವರು ಖೂಬಾರವರು ಎಂದು ಹೇಳಬಹುದು.

ಬೀದರ ಜಿಲ್ಲೆಯ ಅನುವಾದಕರಲ್ಲಿ ಒಬ್ಬರಾದ ಅವರು ಹಿಂದೀ, ಕನ್ನಡ ಭಾಷಾ ಪದವೀಧರರು. ಉತ್ತಮವಾದುದು ಎಲ್ಲಿಯೇ ಇರಲಿ ಅದನ್ನು ಗ್ರಹಿಸುವ ಮತ್ತು ತನ್ನತನಕ್ಕೆ ಅದನ್ನು ಅಳವಡಿಸಿಕೊಳ್ಳುವ ಪ್ರವೃತ್ತಿಯುಳ್ಳವರು ಹಾಗೂ ಆ ಮೂಲಕ ಸಾಹಿತ್ಯ ಕ್ಷೇತ್ರವನ್ನು ವಿಸ್ತರಿಸಿಕೊಳ್ಳುವ ಕಾರ್ಯ ಶ್ರೇಷ್ಟವಾದುದು ಎಂಬುದನ್ನು ಅರಿತವರು. ಹೀಗಾಗಿ ಕನ್ನಡದಲ್ಲಿ ಸಾಹಿತ್ಯ ರಚಿಸುವುದಲ್ಲದೆ ಹಿಂದೀ ಭಾಷೆಯ ಅನೇಕ ಸೃಜನಶೀಲ ಸಾಹಿತ್ಯ ರೂಪಗಳನ್ನು ಕನ್ನಡಕ್ಕೆ ತಂದರಲ್ಲದೆ, ಅತ್ಯುತ್ತಮ ಕಥೆ, ಕೃತಿಗಳನ್ನು ಅನುವಾದಿಸಿದ್ದಾರೆ. ಗದ್ಯ ಮತ್ತು ಪದ್ಯಗಳೆರಡು ಪ್ರಕಾರಗಳಲ್ಲಿ ಅನುವಾದ ಕಾರ್ಯವನ್ನು ಕೈಗೆತ್ತಿಕೊಂಡು ಅದರಲ್ಲಿ ಯಶಸ್ಸನ್ನು ಹೊಂದಿರುವುದನ್ನು ಅವರ ಈ ಸಾಹಿತ್ಯದ ಹಿನ್ನೆಲೆಯಲ್ಲಿ ಗುರುತಿಸಬಹುದು.

ಬಂಡೆಪ್ಪ ಅವರ ಅನುವಾದ ಸಾಹಿತ್ಯ ನೋಡಿದರೆ ಇನ್ನು ಪ್ರಗತಿಯತ್ತ ಸಾಗುತ್ತಿರುವಂತಹದದ್ದು ಈಗ ೧೫ ಹಿಂದೀ ಅನುವಾದಿತ ಕಥೆಗಳು ಪ್ರಕಟವಾಗಿದ್ದು, ಈ ಸಂಖ್ಯೆ ಕಡಿಮೆಯೆನಿಸಬಹುದು ಆದರೆ ಅವುಗಳಲ್ಲಿರುವ ಗುಣಾತ್ಮಕತೆಯನ್ನು ನೋಡಿದರೆ ಕನ್ನಡ ಸಾಹಿತ್ಯಕ್ಕೆ ಅವು ಮಹತ್ವಪೂರ್ಣ ಕೊಡುಗೆಯಾಗಿ ನಿಲುತ್ತಾ ಅವರು ಮಾಡಿದ ಭಾಷಾಂತರವು ಗಟ್ಟಿಯಾಗಿದೆ. ಅನುವಾದಕ್ಕಾಗಿ ಆರಿಸಿಕೊಂಡಿದ್ದವುಗಳು ಸುಪ್ರಸಿದ್ಧ ಹಿಂದೀ ಲೇಖಕರ ಅತ್ಯುತ್ತಮ ಕಥೆಗಳು ಅವರ ಈ ಅನುವಾದದ ಮೂಲ ಉದ್ದೇಶವೇನೆಂದರೆ ಹಿಂದಿ ಭಾಷೆಯ ಸತ್ವವನ್ನು, ನಯವನ್ನು ಹಾಗೂ ಭಾಷಾ ಸಂಪತ್ತನ್ನು ಕನ್ನಡಗರಿಗೆ ಪರಿಚಯಿಸುವುದಾಗಿದೆ. ಅನುವಾದ ಮಾಡುವಾಗ ಪ್ರಜ್ಞಾಪೂರ್ವಕವಾಗಿ ಭಾಷಾ ಸಂರಚನೆ ಮತ್ತು ಅದರ ಛಂದಸ್ಸು ಕೆಡದಂತೆ ಸೃಜನಶೀಲತೆಯನ್ನು ಉಳಿಸಿಕೊಂಡು ಬಂದಿರುವುದು ಇಲ್ಲಿ ಗಮನಾರ್ಹ.

ಎರಡು ಭಾಷೆಯಲ್ಲಿ ಸಮಾನ ಪಾಂಡಿತ್ಯ ಹೊಂದಿದ ಕವಿ ಕನ್ನಡದಲ್ಲಿ ಉತ್ತಮವಾದ ಕಥೆಯನ್ನು ರಚಿಸದಿದ್ದರೂ ಹಿಂದೀ ಭಾಷೆಯಲ್ಲಿನ ಉತ್ತಮವಾದ ಕಥೆಗಳನ್ನು ಕನ್ನಡಕ್ಕೆ, ಮೂಲ ಕೆಡದಂತೆ ಅನುವಾದ ಮಾಡಿದ್ದು ಸಹ ಸೃಜಲಶೀಲ ಕಾರ್ಯ ಎನ್ನಬಹುದು. ಹೀಗಾಗಿ ಖೂಬಾರವರು, ಮೊದಲು 'ತ್ರಿಶಂಕುವಿನಮನೆ' ಎಂಬ ಕಥೆಯನ್ನು ಅನುವಾದ ಮಾಡಿ

'ಸಂಯುಕ್ತ ಕರ್ನಾಟಕ' ದಿನ ಪತ್ರಿಕೆಗೆ ಕಳುಹಿಸಿದರು. ಕೂಡಲೇ ಆ ಕಥೆಯು ಪ್ರಕಟಗೊಂಡದ್ದೇ ಇವರ ನಂತರದ ಕಥೆಗಳ ಅನುವಾದಕ್ಕೆ ಮೂಲ ಪ್ರೇರಣೆ ಎನ್ನಬಹುದು.

ಅನುವಾದಕ್ಕಾಗಿ ಹಲವು ಲೇಖಕರ ಕಥೆಗಳನ್ನು ಆರಿಸಿಕೊಂಡರೆ ಬೇರ ಬೇರೆ ಕಥಾ ವೈವಿಧ್ಯತೆ, ಕಥಾ ತಂತ್ರ, ಶೈಲಿ ಮತ್ತು ಕಥಾನಕಗಳು ವಿಭಿನ್ನವಾಗಿ ಕಾಣಸಿಗುತ್ತವೆ. ಆದ್ದರಿಂದ ಹಿಂದೀ ಸಾಹಿತ್ಯದಲ್ಲಿರುವ ಕಥಾತಂತ್ರದ ವೈವಿಧ್ಯವನ್ನು ಕನ್ನಡಿಗರಿಗೆ ಪರಿಚಯಿಸಿದಂತಾಗುವುದೆಂಬುದು ಅನುವಾದಕನ ಮೂಲ ಆಶಯವಾಗಿದ್ದು ಅಂತೆಯೇ ಈ ಕಾರ್ಯಕ್ಕೆ ತೊಡಗಿದ್ದಾರೆ.

'ಪುರಸ್ಕಾರ' ಮತ್ತು 'ಬಿಂಬ–ಪ್ರತಿಬಿಂಬ' ಎಂಬ ಕಥಾ ಸಂಕಲನಗಳ ಮೂಲಕ ಕನ್ನಡದ ಕಥಾ ಪರಂಪರೆಗೆ ತನ್ನದೇ ಆದ ಕೊಡುಗೆಯನ್ನು ನೀಡಿದ್ದು, ಅವರ ಸೃಜನಶೀಲ ಮನಸ್ಸು ಮತ್ತು ಅನುವಾದಾತ್ಮಕ ಗುಣ ಈ ಎರಡೂ ಕೃತಿಗಳಲ್ಲಿ ಕಾಣಸಿಗುತ್ತಿದ್ದು, ಅವುಗಳನ್ನು ಹೀಗೆ ಗುರುತಿಸಬಹುದು.

**"ಪುರಸ್ಕಾರ"[೧] ಃ**

ಬಂಡೆಪ್ಪ ಖೂಬಾರವರ ಅನುವಾದಿತ ಕಥೆಗಳ ಪ್ರಥಮ ಸಂಕಲನ ೧೯೯೬ರಲ್ಲಿ ಪ್ರಕಟಗೊಂಡಿರುವ ಇದರಲ್ಲಿ ಹನ್ನೊಂದು ಕಥೆಗಳಿವೆ. ಅವುಗಳೆಂದರೆ ಃ–

| | ಕಥೆಯ ಹೆಸರು | | ಮೂಲ ಲೇಖಕರು |
|---|---|---|---|
| ೧. | ಪುರಸ್ಕಾರ | – | ಜಯಶಂಕರ ಪ್ರಸಾದ |
| ೨. | ಗೋಧಿಯ ಬೆಲೆ | – | ಪ್ರೇಮಚಂದ |
| ೩. | ಕ್ಷಮೆ | – | ಶಿವರಾನಿ ಪ್ರೇಮಚಂದ |
| ೪. | ಸನ್ಯಾಸಿ | – | ಸುದರ್ಶನ |
| ೫. | ಪರದೆ | – | ಯಶಪಾಲ |
| ೬. | ಚಿಕ್ಕಮ್ಮ | – | ಶಿಯಾರಾಮ ಶರಣಗುಪ್ತ |
| ೭. | ಇನಾಮು | – | ಜೈನೇಂದ್ರಕುಮಾರ |
| ೮. | ಗೌರಿ | – | ಸುಬದ್ರಾಕುಮಾರಿ ಚೌಹಾನ |
| ೯. | ಹಿನ್ನಡೆ | – | ಉಷಾ ಪ್ರಿಯಂವಧಾ |
| ೧೦. | ಅಂತಿಮ ಭೇಟಿ | – | ಮೋಹನಲಾಲ ಮಹತೋ'ವಿಯೋಗಿ' |
| ೧೧. | ತ್ರಿಶಂಕುವಿನ ಮನೆ | – | ಹರಿಶಂಕರ ಪರಸಾಯಿ |

---

**ಅಡಿ ಟಿಪ್ಪಣಿ :**

೧. ಬಿ.ಎಸ್. ಖೂಬಾ "ಪುರಸ್ಕಾರ" – ೧೯೯೬ (ಪರಿವಿಡಿ) ಪ್ರ. ಪಾವನ ಪಬ್ಲಿಕೇಶನ್ ಗುಲಬರ್ಗಾ.

ಹಿಂದೀ ಭಾಷೆಯಿಂದ ಅನುವಾದಿತಗೊಂಡಿರುವ ಈ ಎಲ್ಲ ಕಥೆಗಳ ವಸ್ತು, ಭಾಷೆ, ಶೈಲಿ ಹಾಗೂ ಸ್ವರೂಪದ ದೃಷ್ಟಿಯಿಂದ ಗಮನಾರ್ಹವಾಗಿದ್ದು, ಸಾಮಾಜಿಕವಾದ ಹಲವು ಚಿಂತನೆಗಳಿಂದ ಕೂಡಿವೆ. ಅತ್ಯಂತ ಸರಳವಾಗಿ ಓದಿಸಿಕೊಂಡು ಹೋಗುವ ಗುಣ ಹೊಂದಿರುವ ಈ ಎಲ್ಲ ಕಥೆಗಳು ಹಲವು ದೃಷ್ಟಿಯಿಂದ ಅನುವಾದಿತ ಕಥೆಗಳು ಎನಿಸುವುದಿಲ್ಲ. ಅಷ್ಟೊಂದು ಮೂಲ ಗುಣವನ್ನು ಇವು ಉಳಿಸಿಕೊಂಡು ನಿಂತಿರುವುದನ್ನು ಮನಗಾಣಬಹುದು.

'ಪುರಸ್ಕಾರ' ಇದು ಸಾಂಸ್ಕೃತಿಕ ಹಿನ್ನಲೆಯಲ್ಲಿ ನಿರ್ಮಿಸಿದ ರಾಜಮನೆತನಗಳಿಗೆ ಸಂಬಂಧಿಸಿದ ಕಥೆಯಾಗಿದ್ದು, ಪರಸ್ಪರ ವೈರಿಗಳಾಗಿದ್ದ ಎರಡು ರಾಜಮನೆತನಗಳು ಮಧ್ಯದಲ್ಲಿನ ವ್ಯಕ್ತಿತ್ವವನ್ನು ಪ್ರೇಮವು ಹೇಗೆ ಮರೆಯುವಂತೆ ಮಾಡುತ್ತದೆ ಎಂಬುದನ್ನು ತೋರಿಸುತ್ತದೆ. ಮಾನವೀಯ ಮೌಲ್ಯದ ಪ್ರತೀಕವಾಗಿರುವ ಪ್ರೇಮದ ಪ್ರಸ್ತಾಪವು ಈ ಕಥೆಯ ಕೇಂದ್ರ ಬಿಂದು. ಇದನ್ನು ವಿವರಿಸುವ ಕಥಾ ಚೌಕಟ್ಟು ಮನನೀಯವಾಗಿ ಅಭ್ಯವ್ಯಕ್ತಿಗೊಂಡಿರುವುದನ್ನು ಇಲ್ಲಿ ಗುರುತಿಸಬಹುದು.

ಈ ಕಥೆಯ ಮುಖ್ಯ ಪಾತ್ರವಾದ ಸಿಂಹಮಿತ್ರನ ಮಗಳಾದ ಮಧುಲಿಕಾ ಎಂಬ ಕೃಷಿಕ ಬಾಲಿಕೆಗೆ ಕೋಸಲದ ರಾಷ್ಟ್ರೀಯ ನಿಯಮದ ಪ್ರಕಾರ ಆ ವರ್ಷವು ಮಧುಲಿಕಾಳ ಹೊಲ ಇಂದ್ರ ಪೂಜೆಗೆ ಆಯ್ಕೆಯಾಗಿದ್ದರಿಂದ ಒಂದು ತಾಟಿನಲ್ಲಿ ಸ್ವರ್ಣ ಮುದ್ರೆಗಳನ್ನು ಕೊಡಲು ಹೋದಾಗ ಮಧುಲಿಕಾಳು "ಮಹಾರಾಜರೇ ಇದು ನನ್ನ ತಾತ ಮುತ್ತಾತರಿಂದ ಬಂದ ಭೂಮಿ ಇದೆ. ಈ ಭೂಮಿ ನಾನು ನಿಮಗೆ ಸಮರ್ಪಿಸಲು ನಿರಾಕರಿಸುತ್ತಿಲ್ಲ. ಆದರೆ ಭೂಮಿಯ ಮೌಲ್ಯ ಸ್ವೀಕರಿಸಲು ನಿರಾಕರಿಸುತ್ತೇನೆ"[೨] ಇಲ್ಲಿ ಮಧುಲಿಕಾಳಿಗೆ ಆರ್ಥಿಕ ಬಡತನವಿದ್ದರೂ ಸ್ವಾಭಿಮಾನದ ಕೊರತೆ ಇಲ್ಲದಿರುವುದನ್ನು ತಿಳಿಸುತ್ತ, ಆ ಮೂಲಕ ಅದರ ಮೌಲ್ಯವನ್ನು ತೋರಿಸುತ್ತಾರೆ.

ಮಧುಲಿಕಾ ಮತ್ತು ಅರುಣನ ಮಧ್ಯೆ ಪ್ರೇಮವು ಸ್ವಾಭಾವಿಕವಾಗಿ ಪ್ರವೇಶ ಮಾಡುತ್ತದೆ. ಇದರಿಂದ ಮಧುಲಿಕಾಳು ದ್ವಂದ್ವದಲ್ಲಿ ಸಿಲುಕಿ, ಕೊನೆಗೆ ಹೆತ್ತ ನಾಡಿನ ರಕ್ಷಣೆಗೆ ಸಹಾಯ ಮಾಡುವಲ್ಲಿ ಅವಳಲ್ಲಿರುವ ದೇಶಪ್ರೇಮ ಎದ್ದು ಕಾಣುತ್ತದೆ. ಏಕೆಂದರೆ ಹೊತ್ತ ನಾಡಿನ ಹಿತಕ್ಕಾಗಿ ತನ್ನ ಪ್ರೀತಿಯನ್ನೇ ಮುಡಿಪಾಗಿಡುವ ಅವಳು ಇಲ್ಲಿ ಮುಖ್ಯವಾಗುತ್ತಾಳೆ. ಅಲ್ಲದೇ ಮಹಾರಾಜರನ್ನು ತನ್ನ ಪ್ರಿಯತಮನೊಂದಿಗೆ ಪ್ರಾಣ ಶಿಕ್ಷೆಕೊಟ್ಟು 'ಪುರಸ್ಕರಿಸು' ಎಂದು ಕೇಳುವಲ್ಲಿ ಮಧುಲಿಕಾಳು ತನ್ನ ಆದರ್ಶವನ್ನು ತೋರಿಸುವುದರೊಂದಿಗೆ ಇಂದಿನ ಜೀವನಕ್ಕೂ ಮಾದರಿಯಾಗುತ್ತಾಳೆ.

'ಗೋಧಿಯ ಬೆಲೆ'[೩] ಕಥೆಯಲ್ಲಿ ಶ್ರೀಮಂತರು, ಮುಗ್ಧರಾದ ಬಡವರನ್ನು ಹೇಗೆ ಶೋಷಿಸುತ್ತಾರೆ. ಶ್ರೀಮಂತರ ಬಿಸೀದ ಬಲೆಗೆ ಬಿದ್ದು ತಮ್ಮ ಜೀವನವನ್ನೇ ನಾಶ

**ಅಡ ಟಿಪ್ಪಣಿ :**

೨. ಬಿ.ಎಸ್. ಖೂಬಾ "ಪುರಸ್ಕಾರ" – ೧೯೯೬ (ಪುಟ–೦೨) ಪ್ರ. ಪಾವನ ಪಬ್ಲಿಕೇಶನ್ ಗುಲಬರ್ಗಾ.

೩. ಬಿ.ಎಸ್. ಖೂಬಾ "ಪುರಸ್ಕಾರ" – ೧೯೯೬ (ಪುಟ–೧೩) ಪ್ರ. ಪಾವನ ಪಬ್ಲಿಕೇಶನ್ ಗುಲಬರ್ಗಾ.

ಮಾಡಿಕೊಳ್ಳುತ್ತಾರೆ ಎಂದು ತೋರಿಸುವುದೇ ಕಥೆಯ ಉದ್ದೇಶವಾಗಿದ್ದು, ಇಂದಿನ ವಾಸ್ತವ ಬದುಕನ್ನು ತೆರೆದು ತೋರಿಸುತ್ತದೆ.

ಸರಳ ಸ್ವಭಾವದ ಬಡ ರೈತನಾದ ಶಂಕರನು ನಿರ್ಮಲ ಮನಸ್ಸುಳ್ಳವನಾಗಿದ್ದು, ಒಂದು ದಿನ ಒಬ್ಬ ಮಹಾತ್ಮನಿಗೆ ಭೋಜನ ಮಾಡಿಸಲು ವಿಪ್ರನಿಂದ ಸವಾಸೇರು ಗೋಧಿಯನ್ನು ತಂದಿದ್ದಕ್ಕಾಗಿ ವಿಪ್ರ ಮಹಾರಾಜನಿಗೆ ಸವಾಸೇರು ಬದಲಾಗಿ ಏಳೂವರೆ ಸೇರು ಗೋಧಿಯನ್ನು ಎರಡು ಸಲ ನೀಡಿ ಋಣಮುಕ್ತನಾಗಿದ್ದೆನೆಂದು ನಿಶ್ಚಿಂತನಾದನು. ಆದರೆ ಸವಾಸೇರು ಗೋಧಿಯ ಋಣ ತೀರಿಸಲು ಎರಡನೆಯ ಜನ್ಮ ತೆಗೆದುಕೊಳ್ಳ ಬೇಕಾಗುತ್ತದೆಂಬ ಸಂಗತಿಯು ಶಂಕರನಿಗೆ ತಿಳಯದಿದ್ದುದನ್ನು ಕಥೆ ತಿಳಿಸುತ್ತದೆ.

ವಿಪ್ರನು ಶಂಕರನಿಗೆ ಕೊಟ್ಟ ಸವಾಸೇರ ಗೋಧಿಯು ''ತತ್ತಿಯ ಆಕಾರದಲ್ಲಿ ಬೆಳೆದು ಈಗ ಪಿಶಾಚಾಕಾರದಲ್ಲಿ ಮೂಡಿ ನಿಂತಿದ್ದ ಶಂಕರನನ್ನೆ ನುಂಗಿ ಬಿಡುವಂತಾಗುತ್ತದೆ. ಏಳು ವರ್ಷಗಳ ನಂತರ ಅದು ಐದೂವರೆ ಮಣದಷ್ಟು ಗೋಧಿಯಾಗುತ್ತವೆ. ಹೀಗೆ ವಿಪ್ರನು ಸಾಸಿವೆಗೆ ಪರ್ವತ ಮಾಡಿಬಿಟ್ಟಿದ್ದಾನೆ''[೪] ವಿಪ್ರನಿಂದ ಋಣಮುಕ್ತನಾಗಲು ಗೋಧಿಯ ಬೆಲೆ ಅರವತ್ತು ರೂಪಾಯಿ ಆಗಿದ್ದಲ್ಲದೆ ಶೇಕಡಾ ಎರಡುವರೆ ಬಡ್ಡಿ ಒಂದು ವರ್ಷದೊಳಗೆ ಕೊಡದಿದ್ದರೆ ಮೂರುವರೆ ಶೇಕಡಾ ಬಡ್ಡಿ ಹನ್ನೆರಡು ಆಣೆ ಸ್ಟ್ಯಾಂಪ್ ಖರ್ಚು ಒಂದು ರೂಪಾಯಿ ಕರಾರು ಪತ್ರ ಬರೆದವನ ಖರ್ಚನ್ನು ಶಂಕರನೇ ಕೊಡಬೇಕಾಯಿತು. ಹೀಗೆ ಶಂಕರನು ಇಡೀ ವರ್ಷ ದುಡಿದು ಮುದ್ದತ್ತಿಗಿಂತ ಮುಂಚೆ ಸಾಲದಿಂದ ಮುಕ್ತನಾಗುವ ಕನಸು ಕನಸಾಗಿಯೇ ಉಳಿದು, ಆ ಪರಿಣಾಮವಾಗಿ ಅವನ ಸಂಯಮ ಶಕ್ತಿಕುಗ್ಗಿ, ಬಡ್ಡಿಯಲ್ಲೇ ವಿಪ್ರನ ಹೊಲದಲ್ಲಿ ಇಪ್ಪತ್ತು ವರ್ಷ ದುಡಿದು, ಶಂಕರನ ಶರೀರವು ಅಂತ್ಯಗೊಂಡಿತು. ಆದರೆ ವಿಪ್ರನು ಬಡ್ಡಿಯ ಹಣದಲ್ಲಿ ಶಂಕರನ ಮಗನನ್ನು ದುಡಿಸಿಕೊಳ್ಳುತ್ತಿರುವುದನ್ನು ಕತೆ ಹೇಳುವುದರೊಂದಿಗೆ, ಇಂದು ಈ ಬದುಕು ಬದುಕುತ್ತಿರುವ ಹಲವು ಕುಟುಂಬಗಳ ಸ್ಥಿತಿಗತಿಗೆ ಕನ್ನಡಿ ಹಿಡಿಯುವಲ್ಲಿ ಸಫಲವಾಗಿ ನಿಲುತ್ತದೆ.

''ಪರದೆ''[೫] ಕಥೆಯಲ್ಲಿ ಬಡತನ ಹಾಸುಹೊಕ್ಕಾಗಿದೆ. ಬಡತನವಿದ್ದರೂ ಸ್ವಾಭಿಮಾನ ಗೌರವಕ್ಕಾಗಿ ತೋರಿಕೆಗಾಗಿ ತನ್ನ ಬಡತನದ ಸ್ಥಿತಿಯನ್ನು ಮುಚ್ಚಿಟ್ಟಿದ ಪರಿಣಾಮವಾಗಿ ಕೊನೆಗೆ ಇಲ್ಲಿಯ ಒಂದು ಕುಟುಂಬವು ದುರಂತದಲ್ಲಿ ಅಂತ್ಯಗೊಳ್ಳುತ್ತದೆ. ಇಲ್ಲಿ ಗಮನ ಸೆಳೆಯುವುದು ಮುಖ್ಯವಾಗಿ ತೋರಿಕೆಯ ಜೀವನ ಮತ್ತು ನಿಜವಾದ ಜೀವನ ಇವೆರಡರ ಹೇಳಿಕೆಯು.

ಅಡಿ ಟಿಪ್ಪಣಿ

೪. ಬಿ.ಎಸ್. ಖೂಬಾ ''ಪುರಸ್ಕಾರ'' – ೧೯೯೬ (ಪುಟ–೧೫)

೫. ಬಿ.ಎಸ್. ಖೂಬಾ ''ಪುರಸ್ಕಾರ'' – ೧೯೯೬ (ಪುಟ–೪೭)

ಈ ಕಥೆಯ ಕಥಾನಾಯಕನಾದ ಚೌಧರಿ ಪೀರಬಕ್ಸನು ಮನೆತನದ ಗೌರವಕ್ಕಾಗಿ ಪ್ರಮಾಣಿಕವಾಗಿ ದುಡಿಯುತ್ತಾನೆ, ಅಲ್ಲದೆ ಅಲ್ಪಸ್ವಲ್ಪ ವಿದ್ಯಾವಂತನಾದುದ್ದರಿಂದ ಸಮಾಜದಲ್ಲಿ ಗೌರವಿಸುತ್ತಿದ್ದರು. ಈ ಮರ್ಯಾದೆಯ, ಆಧಾರಸ್ತಂಭ ಹಾಗೂ ಕಥೆಯ ಕೇಂದ್ರ ಬಿಂದು ಅವರ ಮನೆಯ ಬಾಗಿಲಿನ ಆ ಪರದೆಯೇ ಆಗಿತ್ತು. ಮನೆ ಒಳಗಡೆ ಏನೇ ಇರಲಿ ಪರದೆಯು ಮಾತ್ರ ಸುರಕ್ಷಿತವಾಗಿತ್ತು.

ಒಮ್ಮೆ ಪೀರಬಕ್ಸನಿಗೆ ಹಣ ಬೇಕಾದಾಗ ಪಂಜಾಬಿ ಖಾನನಿಂದ ನಾಲ್ಕು ರೂಪಾಯಿ ಸಾಲವನ್ನು ಪಡೆದನು. ರೂಪಾಯಿಗೆ ಎರಡಾಣೆ ಬಡ್ಡಿಯಂತೆ ತಿಂಗಳು ತಿಂಗಳಿಗೆ ಕೊಡಲೊಪ್ಪಿದನು. ಕ್ರಮೇಣ ಪೀರಬಕ್ಸನ ಮನೆಯ ಪರಿಸ್ಥಿತಿ ಹದೆಗೆಟ್ಟದ್ದರಿಂದ ಖಾನನ ಕೊನೆಯ ಕಂತನ್ನು ಕಟ್ಟಲಿಲ್ಲ. ದುರ್ದೈವದ ಸಂಗತಿಯೆಂದರೆ ಪರಿಹಾರ ಕಂಡುಕೊಳ್ಳದರಿಂದ ಪಿರಬಕ್ಸನು ತನ್ನ ಚರ್ಮವೇ ಸುಲಿದುಕೋ ಎಂದು ಬೇಡಿಕೊಂಡನು. ಖಾನನು ಅದಕೊಪ್ಪದೆ "ನಿನ್ನ ಚರ್ಮಕ್ಕಿಂತ ಪರದೆಯು ಉತ್ತಮವಾಗಿದೆ ಎಂದು ಬಾಗಿಲಿಗೆ ಜೋಕು ಹಾಕಿರುವ ಪರದೆಯನ್ನು ಜಗ್ಗಿದನು, ಇದನ್ನು ಕಣ್ಣಾರೆ ಕಂಡ ಪೀರಬಕ್ಸನು ಮೂರ್ಛೆ ಹೋಗಿ ನೆಲಕ್ಕೆ ಉರುಳಿದನು".[೬] ಇದು ಕೇವಲ ಬಾಗಿಲಿನ ಪರದೆಯಾಗಿಂದ ಅದು ಪೀರಬಕ್ಸನ ಜೀವನದ ದಾರವೇ ಆದಾಗಿರುವ ಚಿತ್ರಣ ಇದರಲ್ಲಿದೆ.

ಇದು ಆ ಮನೆಯ ಮರ್ಯಾದೆಯಾಗಿತ್ತು. ಅದನ್ನು ಎಳೆದಾಗ ಇಡೀ ಮನೆಯವರ ಬಟ್ಟೆಯನ್ನೆ ಸೆಳೆದುಕೊಂಡಂತಾಯಿತು. ಆ ಕುಟುಂಬದವರ ನಿಜವಾದ ಮೈಮೇಲಿನ ವಸ್ತ್ರವು ಅದುವೆ ಆಗಿತ್ತು. ಈಗ ಅವರ ಶರೀರದ ಮೇಲೆ ಉಳಿದಿರುವುದು ಚಿಂದಿಗಳು ಮಾತ್ರ. ಅವು ಕೇವಲ ಅವರ ಶರೀರದ ಮೂರನೇ ಒಂದು ಭಾಗವನ್ನು ಮುಚ್ಚುಕೊಂಡಿದ್ದವು. ನಿನ್ನೆಯವರೆಗೆ ಆ ಪರದೆಯು ಅವರ ಮರ್ಯಾದೆ ಮುಚ್ಚಿದ್ದುದು ಈಗ ಅದು ಮಣ್ಣುಪಾಲು ಆಗುವಂತೆ ಮಾಡಿರುವುದನ್ನು ತಿಳಿಸುವಲ್ಲಿ ಇಂತಹ ಬಡತನದ ಅತಿ ಕೆಳಸ್ತರದ ಬದುಕಿನ ಚಿತ್ರವನ್ನು ತೋರುತ್ತದೆ.

ಒಟ್ಟಿನಲ್ಲಿ ಈ ಕಥೆಗಳಲ್ಲಿ ಹಣವಂತರು ಮುಗ್ಧ ಜನರನ್ನು ಬಲಿ ತೆಗೆದುಕೊಳ್ಳುತ್ತಿರುವುದು ಸರ್ವೆಸಾಮಾನ್ಯವಾಗಿದೆ ಎಂಬುದನ್ನು ಕವಿಯು ಜನತೆಗೆ ತಿಳಿಸುತ್ತಾನೆ ಎನ್ನಬಹುದು.

'ಕ್ಷಮೆ'[೭] ಕಥೆಯಲ್ಲಿ ಕಥಾನಾಯಕನು ಪ್ರೇಮದ ಪಾಶದಲ್ಲಿ ಸಿಲುಕಿ ಶರಣಾಗುತ್ತಾನೆ. ಆದರೆ ಈ ಕಡೆ ತನ್ನ ಗಂಡನು ವಿದೇಶಕ್ಕೆ ಹೋಗಿ ಪ್ರೀತಿಸಿದ ಆ ಸ್ತ್ರೀಯನ್ನು ಮದುವೆಯಾಗಿ

---

ಅಡಿ ಟಿಪ್ಪಣಿ ।

೦೬. ಬಿ.ಎಸ್. ಖೂಬಾ "ಪುರಸ್ಕಾರ"---೧೯೯೬ (ಪುಟ-೫೪)

೦೭. ಬಿ.ಎಸ್. ಖೂಬಾ "ಪುರಸ್ಕಾರ" – ೧೯೯೬ (ಪುಟ-೨೧) ಪ್ರ. ಪಾವನ ಪಬ್ಲಿಕೇಶನ್ ಗುಲಬರ್ಗಾ.

ಅವಳನ್ನು ಬರುವಾಗ ಸ್ವದೇಶಕ್ಕೆ ಕರೆತಂದಾಗ ಅವನ ಮೊದಲ ಹೆಂಡತಿಯ ಹೃದಯ ಛಿದ್ರಗೊಳ್ಳುತ್ತದೆ. ಆದರೂ ಗಂಡನ ಮೇಲಿನ ನಿಜವಾದ ಪ್ರೀತಿಯನ್ನು ತ್ಯಾಗ ಮಾಡಿ ವಿದೇಶದಿಂದ ಬಂದ ಸ್ತ್ರೀಯ ಜೊತೆಗೆ ಬಾಳಲು ಅವಕಾಶ ಮಾಡಿಕೊಡುತ್ತಾಳೆ. ಅಲ್ಲದೇ ಗಂಡನಿಗೆ ಗುರುತಾಗದಂತೆ ಮನೆ ಬಿಟ್ಟು ಹೋಗುವ ಪ್ರಸಂಗವನ್ನು ತಂದುಕೊಳ್ಳುತ್ತಾಳೆ. ಭಾರತೀಯ ಸ್ತ್ರೀಯೊಬ್ಬಳ ಜೀವನದ ಆದರ್ಶವೆನಿಸುವ ಈ ಕಥೆಯು ಅದಕ್ಕೆ ಮೂಲವಾದ ಶೋಷಣೆ ನೀಡಿದ ಗಂಡನನ್ನು ದೂರ ಮಾಡುವ ಪ್ರತಿಭಟನೆಯನ್ನು ಅಲ್ಲಿ ಅದು ತೋರುತ್ತದೆ. ಗಂಡನ ನಿರ್ಲಕ್ಷ್ಯಕ್ಕೆ ಗುರಿಯಾಗಿ, ಆತನ ಬೇಡವಾದ ಹೆಂಡತಿಯಾಗಿ ಬದುಕುವುದಕ್ಕಿಂತ, ಅಲ್ಲಿಂದ ಹೊರಟು ಹೋಗುವುದೇ ಮೇಲೆಂಬುದನ್ನು ಅವಳು ಸೂಚಿಸುತ್ತಾಳೆ ಆದರ್ಶದ ಅನುಕರಣೆಗಿಂತ, ಅದರ ಹಿಂದಿರುವ ಪ್ರತಿಭಟನೆಯನ್ನು ಆ ಕಥೆ ತೋರುತ್ತದೆ.

'ಸನ್ಯಾಸಿ'[೧೮] ಎಂದರೆ ಸಂಸಾರವನ್ನು ತ್ಯಜಿಸಿದವನು ಎಂದು ಕೇಳುತ್ತಲೇ ಎಲ್ಲರಿಗೆ ಹೊಳೆಯುತ್ತದೆ. ಇದು ಒಂದು ಸಾಮಾನ್ಯವಾದ ಅರ್ಥ. ಇನ್ನೊಂರ್ಥದಲ್ಲಿ ಸಂಸಾರದಿಂದ ದೂರಸರಿದರೆ ಸುಖಸಿಗುತ್ತದೆಂಬ ಭಾವನೆ. ಮನಸ್ಸು ಶಾಂತಿಯಿಂದ ಕೂಡಿರುತ್ತದೆ ಎಂಬ ಆಶಯ. 'ಸನ್ಯಾಸಿ' ಕಥೆಯ ಕಥಾನಾಯಕನು ಜೀವನದಲ್ಲಿ ಬಂದೊದಗಿದ ಸೋಲುಗಳನ್ನು ಎದುರಿಸಲಾಗದೆ ತನ್ನ ಒಬ್ಬನೇ ಒಬ್ಬ ಮಗನನ್ನು ಅಣ್ಣ ಅತ್ತಿಗೆಗೆ ಒಪ್ಪಿಸಿ ಸಂಸಾರದಿಂದ ವಿಮುಕ್ತಿ ಪಡೆದುಕೊಂಡು ಸನ್ಯಾಸಿಯಾಗಿ ಮಾರ್ಪಡುತ್ತಾನೆ. ಆದರೆ ಅವನಿಗೆ ನಿಜವಾದ ಶಾಂತಿ ಕಾಣದೆ ಪುನಃ ಮರಳಿ ಬಂದು ಸಂಸಾರದಲ್ಲಿದ್ದಕೊಂಡು ಜೀವಿಸುವಾಗ ಶಾಂತಿಯು ಮನನವಾಗುತ್ತದೆ. ಕೊನೆಗೆ ಶಾಂತಿಯು ಸನ್ಯಾಸದಲ್ಲಿಲ್ಲ. ಸಂಸಾರದಲ್ಲಿದೆ ಎಂಬುದನ್ನು ತಿಳಿಸಿಕೊಡುವುದೇ ಇಲ್ಲಿ ಮುಖ್ಯ ಎನಿಸುತ್ತದೆ.

'ಸನ್ಯಾಸಿ' ಈ ಕಥೆಯಲ್ಲಿ ಬರುವ ಪಾಲು ಊರಿಗೆಲ್ಲ ಬೇಕಾದ ವ್ಯಕ್ತಿ. ಇದಕ್ಕೆ ಮುಖ್ಯ ಕಾರಣ ಸುಗುಣ ವ್ಯಕ್ತಿಗಳಲ್ಲಿ ಒಬ್ಬನಾಗಿದ್ದ ಆದರೆ ಮನೆಯವರಿಗೆ ಮಾತ್ರ ಬೇಡವಾಗಿದ್ದ. ಪಾಲು ಅಶಿಕ್ಷಿತನಾಗಿದ್ದರೂ ಮೂರ್ಖನಾಗಿರಲಿಲ್ಲ. ಮನುಷ್ಯ ಎಲ್ಲವನ್ನು ಸಹಿಸಿಕೊಳ್ಳುತ್ತಾನೆ. ಆದರೆ ಹೆಂಡತಿಯ ಎದುರು ತನ್ನ ಅಪಮಾನವನ್ನು ಸಹಿಸಿಕೊಳ್ಳುವುದಿಲ್ಲ. ಕೆಲವು ದಿನಗಳಲ್ಲಿ ಪಾಲುಗೆ ಒಂದು ಮಗು ಹುಟ್ಟಿದ್ದಕ್ಕೆ ಸಂತೋಷವಾದರೆ ಮತ್ತೊಂದು ಕಡೆ ದುಃಖದ ಸನ್ನಿವೇಶ ಎದುರಾಗುತ್ತದೆ. ಅವನ ಊರಿನಲ್ಲಿ ಕಾಲರಾ ರೋಗವು ಹರಡಿದರಿಂದ ಆ ರೋಗಕ್ಕೆ ಮೊದಲು ಬಲಿಯಾದ ಮೊದಲ ಮಹಿಳೆಯು ಪಾಲುನ ಹೆಂಡತಿಯೇ ಆಗಿರುತ್ತಾಳೆ. ಕೆಲವೇ ದಿನಗಳಲ್ಲಿ ತಂದೆ ತಾಯಿಯನ್ನು ಕಳೆದುಕೊಳ್ಳುವುದರ ಜೊತೆಗೆ ಎರಡು ಅಘಾತಗಳನ್ನು ಎದುರಿಸಬೇಕಾಗುತ್ತದೆ. ತಾನು ಶಾಂತಿ ಪಡೆಯಲು ಸಂಸಾರದ ಬಂಧನದಿಂದ ಮುಕ್ತಿ ಪಡೆದು ಸನ್ಯಾಸಿಯಾಗಿ ಪ್ರಶಾಂತ ಸ್ಥಳದಲ್ಲಿ ಕುಳಿತು ಧ್ಯಾನ ಮಗ್ನನಾಗುತ್ತಾನೆ. ಶಾಂತಿ ದೊರೆಯದಿದ್ದಲ್ಲಿ

---

**ಅಡಿ ಟಿಪ್ಪಣಿ :**

೧೮. ಬಿ.ಎಸ್. ಖೂಬಾ "ಪುರಸ್ಕಾರ" (ಪುಟ-೩೩)

ಕೊನೆಗೆ ಪೆಚಾಡಿ ಗುರುವಿನಿಂದ ತಿಳಿದುಕೊಂಡು ಕರ್ತವ್ಯ ಪಾಲನೆಯಿಂದ ಮಾತ್ರ ಮನಸ್ಸಿಗೆ ಶಾಂತಿ ದೊರೆಯುತ್ತದೆ"[೯] ಎಂದು ಅರಿತು ಪಾಲು ತನ್ನ ಮನೆಗೆ ಹಿಂದಿರುಗುತ್ತಾನೆ. ಈ ಕಥೆಯಲ್ಲಿ ಕವಿಯ ಲೋಕಾನುಭವವನ್ನು ಗುರುತಿಸುವುದರೊಂದಿಗೆ ಆಧ್ಯಾತ್ಮಕ ಅನುಸಂಧಾನಕ್ಕೆ ಮೊರೆ ಹೋಗುತ್ತಿರುವ ನೀತಿಯನ್ನು ಪುರಸ್ಕರಿಸುತ್ತಾರೆ.

"ಗೌರಿ"[೧೦] ಇದೊಂದು ಕೌಟುಂಬಿಕ ಕಥೆಯಾಗಿದ್ದು, ಇಂದಿನ ಸಮಾಜದಲ್ಲಿ ಹೆಣ್ಣು ಹೆತ್ತವರಿಗೆ ಮನಮುಟ್ಟುವಂತೆ ಇದೆ. ಇಲ್ಲಿ ಸ್ತ್ರೀಯು ತನ್ನ ಜೀವನದಲ್ಲಿ ಪತಿಯನ್ನು ಆರಿಸಿಕೊಳ್ಳುವಾಗ ತೋರಿಸಿದ ಒಂದು ಉದಾತ್ತ ಭಾವನೆಯೇ ಈ ಕಥೆಯ ಮೂಲ ಪ್ರೇರಣೆಯಾಗಿದೆ. ಗೌರಿಯು ಬಡತನದ ಪರಿಸ್ಥಿತಿಯಲ್ಲಿ ಬದುಕಿದವಳಾಗಿದ್ದು ಅವಳಿಗೆ ಯೋಗ್ಯವಾದಂತಹ ಶ್ರೀಮಂತ ವರಗಳು ಹಿಡಿಸದಂತಾಗಿ ಕೊನೆಗೆ ಅವಳು "ತನ್ನ ಮನಸ್ಸಿನಲ್ಲಿ ಒಬ್ಬ ದೇಶ ಪ್ರೇಮಿ, ಪ್ರಾಮಾಣಿಕ ವ್ಯಕ್ತಿಯನ್ನು ಮತ್ತು ಬಡಪತಿಯನ್ನೆ ಆರಿಸಿಕೊಳ್ಳುವುದಾಗಿ ನಿರ್ಧರಿಸುತ್ತಾಳೆ"[೧೧] ಇಂದಿನ ಸಮಾಜದಲ್ಲಿ ಸ್ತ್ರೀಯು ತಾಯಿ ತಂದೆಯವರಿಗೆ ಭಾರವಾಗಿದ್ದಾಳೆ ಎಂಬ ಸಂಗತಿಯನ್ನು ಅಲ್ಲೆಗಳೆಯುವ ಒಂದು ಸುಂದರ ಮಾರ್ಗ ತೋರಿಸಿಕೊಡುವುದು ಮತ್ತು ಸಾತ್ವಿಕ ವ್ಯಕ್ತಿ ಮುಖ್ಯ ಹೊರತು ವೈಭವದ ಶ್ರೀಮಂತಿಕೆ ಅಮುಖ್ಯ ಎಂಬುದನ್ನು ಹಾಗೂ ವರದಕ್ಷಿಣೆ ಪಿಡುಗನ್ನು ಹೋಗಲಾಡಿಸುವ ವಿಧಾನವನ್ನು ನಿರ್ಮಿಸುವುದೇ ಈ ಕಥೆಯ ಮೂಲ ಉದ್ದೇಶವಾಗಿದೆ.

"ಹಿನ್ನಡೆ"[೧೨] ನಿವೃತ್ತ ಜೀವನದ ಒಂದು ಧಾರುಣ ಪರಿಸ್ಥಿತಿಯ ಹಿನ್ನಲೆಯಲ್ಲಿ ಈ ಕಥೆಯನ್ನು ಹೆಣೆಯಲಾಗಿದೆ. ನಿವೃತ್ತನಾದ ವ್ಯಕ್ತಿಯು ಹೆಂಡಿರ ಮಕ್ಕಳೊಂದಿಗೆ ಸುಖಮಯ ಜೀವನವನ್ನು ನಡೆಸಲು ಅಪೇಕ್ಷಿಸುತ್ತಾನೆ. ಆದರೆ ಬಹಳಷ್ಟು ಜನರ ಜೀವನದಲ್ಲಿ ಈ ಅಪೇಕ್ಷೆಯು ನೆರವೇರುವುದಿಲ್ಲ ನಿವೃತ್ತ ವ್ಯಕ್ತಿಯ ಕುಟುಂಬದ ಎಲ್ಲರಿಗೂ ಅಲ್ಲದೆ ಪತ್ನಿಗೂ ಬೇಡಾದವನಾಗಿ ಮನೆ ಬಿಟ್ಟು ಹೋಗುತ್ತಾನೆ. ನಿರಾಸೆಯೆ ಅವನ ಅಂತಿಮ ಜೀವನದ ಸಂಗಾತಿಯಾಗುತ್ತದೆ ಎಂಬುದನ್ನು ಇಲ್ಲಿ ಕಾಣಬಹುದು.

ಈ ಕಥೆಯಲ್ಲಿ ಗಜಾನಬಾಬು ಜೀವನದ್ದುದಕ್ಕೂ ದುಡಿದು ಕುಟುಂಬದವರಿಗೆ ಕೊಡುತ್ತಿದ್ದ ಆದಾಯದಿಂದ ಎಲ್ಲರೂ, ಅವನನ್ನು ಗೌರವಿಸುತ್ತಿದ್ದರು. ಇಲ್ಲಿ ಅವರ ಹೆಂಡತಿ ಮಕ್ಕಳು ನಿಜವಾಗಿ ಪ್ರೀತಿಸುವುದು ಅವನ ದುಡಿಮೆಯಿಂದ ಬಂದ ಗಳಿಕೆಯನ್ನೇ ಹೊರತು ದುಡಿಯುವವನಿಗೆ ಅಲ್ಲ. ಮಕ್ಕಳಾಗುವುದಕ್ಕಿಂತ ಮುಂಚೆ ತೋರುತ್ತಿದ್ದ ಪ್ರೀತಿ, ಭಕ್ತಿ, ನಂತರ ತೋರಲಿಲ್ಲ. ಗಜಾನನಬಾಬು ಪಿಂಚಣಿಯ ನಂತರ ಮನೆಗೆ ಬರುವಾಗ ನೂರಾರು

**ಅಡಿ ಟಿಪ್ಪಣಿ :**

೯. ಬಿ.ಎಸ್. ಖೂಬಾ "ಪುರಸ್ಕಾರ" – ೧೯೯೬ (ಪು.೪೬)
೧೦. --ಅದೇ– (ಪು.೬೭)
೧೧. –ಅದೇ– (ಪು.೭೩)
೧೨. –ಅದೇ– (ಪು.೭೭)

ಕನಸುಗಳನ್ನು ಹೊತ್ತುಕೊಂಡು ಬರುತ್ತಾರೆ. ಇಷ್ಟು ದಿವಸ ನೌಕರಿಗಾಗಿ ಹೆಂಡತಿ ಮಕ್ಕಳಿಂದ ಆಗಲಿದ್ದೇನೆ. ಇನ್ನೇಲೆ ನೆಮ್ಮದಿಯ ಜೀವನ ನಡೆಸಬಹುದು ಎಂದು ಊಹಿಸುತ್ತಾರೆ. ಅವರ ವಿಚಾರಗಳೆಲ್ಲ ಬುಡಮೇಲಾಗುತ್ತವೆ. ಪ್ರತಿಯೊಬ್ಬ ಮನುಷ್ಯನು ಬದುಕಿನಲ್ಲಿ ಮುನ್ನಡೆಯಲು ಪ್ರಯತ್ನಿಸುತ್ತಾನೆ. ಆದರೆ ಗಜಾನನಬಾಬು ಜೀವನದಲ್ಲಿ ಹಿನ್ನಡೆಯು ನಿರ್ಮಾಣವಾಗುತ್ತದೆ. ಅವರ ಆಶೆ-ಆಕಾಂಕ್ಷೆಗಳು ಗಾಳಿಗೋಪುರವಾಗುತ್ತವೆ. 'ಬಂದ ದಾರಿಗೆ ಸುಂಕವಿಲ್ಲ' ಎಂದು ಅರಿತು ಮತ್ತೆ ಸಂಸಾರದಿಂದ ಹೊರ ಬಂದು ಖಾಸಗಿ ಸಕ್ಕರೆ ಮಿಲ್ಲನಲ್ಲಿ ಕೆಲಸ ಮಾಡುವುದಾಗಿ ಮನೆ ಬಿಡುವದು ಕಾಣುತ್ತೇವೆ. ಕೊನೆಗೂ ಗಜಾನನ ಬಾಬು ಅವರ ಕಾಲ್ಪನಿಕ ಸಂತೋಷವು ಒಂದು ಗಹನವಾದ ಉದಾಸೀನತೆಯಲ್ಲಿ ಮುಳುಗಿ ಬಿಡುತ್ತದೆ

'ಅಂತಿಮ ಭೇಟಿ'[೧೩] ಕಥೆಯು 'ಬಡವನ ಸಿಟ್ಟುದವಡೆಗೆ ಮೂಲ' ಎಂಬ ಮಾತಿನಂತೆ ಇಲ್ಲಿಯ ಕಥಾನಾಯಕನಾದ ಪ್ರಕಾಶನು ಬಡವನಾಗಿದ್ದಾನೆ ಹೊರತು ಕೊಲೆಗಾರನಾಗಿರುವುದಿಲ್ಲ ಆದರೆ ದುರ್ದೈವದಿಂದ ಕೊಲೆಯ ಆರೋಪದ ಮೇಲೆ ಅವನನ್ನು ಗಲ್ಲಿಗೇರಿಸಲು ಶಿಕ್ಷೆ ವಿಧಿಸಲಾಗುತ್ತದೆ. ಪ್ರಕಾಶನ ಹೆಂಡತಿಯು "ತನ್ನ ಗಂಡನು ನೈತಿಕ ದೃಷ್ಟಿಯಿಂದ ಅವನು ಅಪರಾಧಿಯಾಗಿರಬಹುದು, ಹಸಿವಿನ ಸಂಕಟವನ್ನು ತಡೆಯಲಾಗದೆ ಅಪರಾಧ ಎಸಗಿದ್ದಾನೆ. ಆದರೆ ಈ ಜಗತ್ತಿನಲ್ಲಿ ನೈತಿಕತೆಯು ಕೇವಲ ಬಡವರ ಪಾಲಿಗೆ ಇದೆಯೇ?"[೧೪] ಎಂದು ಕೇಳುವಲ್ಲಿ ಅರ್ಥ ಗರ್ಭಿತವಾಗಿದೆ ಕೊನೆಗೂ ಗಂಡನು ಕಾಣಲು ಹೋದಾಗ ಪ್ರಕಾಶನ.

ಅಂತರಾಳದಿಂದ ಬಂದ ಮಾತುಗಳಿವು. ನೀನು ಸುಖವಾಗಿರು. ಇದು ನನ್ನ ಅಂತಿಮ ಆಶೀರ್ವಾದ. ಕೊನೆಯ ಮಾತು ನಾಳೆ ಮುಂಜಾನೆ ಬಂದು ನನ್ನ ಶವವನ್ನು ತೆಗೆದುಕೊಂಡು ಹೋಗಬೇಕು ಹಾಗೆಯೇ ಗೋಪಾಲನನ್ನು ನನ್ನ ಪ್ರತಿರೂಪವಾಗಿ ಬಿಟ್ಟು ಹೋಗುತ್ತಿದ್ದೇನೆ. ಚಿಂತೆ ಮಾಡಬೇಡ ಏನಾಗಬೇಕಿತ್ತೋ ಅದು ಆಗಿ ಬಿಟ್ಟಿತ್ತು ಎಂದು ಹೆಂಡತಿಗೆ ಧೈರ್ಯ ಹೇಳಿದ ಪ್ರಕಾಶನನ್ನು ಮಧ್ಯದಲ್ಲಿಯೇ ಮಗ ಗೋಪಾಲನು ಅಪ್ಪಾ! ನಡೆಯಿರಿ ಹೋಗೋಣ" ಎಂದು ಕೇಳುವಲ್ಲಿ ಬಾಲಕನ ಮುಗ್ಧ ಆಗ್ರಹ ಪ್ರಕಾಶನಿಗೆ ಯಾರೋ ತನ್ನ ಹೃದಯಕ್ಕೆ ಜೋರಾಗಿ ಗುದ್ದಿದಂತಾಗುತ್ತದೆ"[೧೫] ಈ ಕಥೆಯ ಆರಂಭ ಮತ್ತು ಅಂತ್ಯ ದುಃಖದಿಂದಲೇ ಕೂಡಿದೆ.

'ತ್ರಿಶಂಕುವಿನ ಮನೆ'[೧೬] ಈ ಕಥೆಯಲ್ಲಿ ಸಮಾನತೆಯ ಏರಿಳಿತಗಳು ಕಂಡುಬರುತ್ತವೆ. ಸಮಾಜದಲ್ಲಿ ದಲಿತರಿಗೆ ಮಾನ-ಸನ್ಮಾನ ದೊರೆಯುವುದು ದುರ್ಲಭ ಶ್ರೀಮಂತರು ಶ್ರೀಮಂತರನ್ನು ಮೆಚ್ಚುತ್ತಾರೆ. ಶ್ರೀಮಂತರು ಗೌರವಸ್ಥರನ್ನು ಬರಮಾಡಿಕೊಳ್ಳುತ್ತಾರೆ. ಇಲ್ಲಿ ಒಬ್ಬ ಶಿಕ್ಷಕನು ತಾನು ಶ್ರೀಮಂತರ ಸಹವಾಸದಲ್ಲಿ ಬಾಳುವ ಕನಸು ಕಂಡು ತನ್ನ ಕನಸು

---

**ಅಡಿ ಟಿಪ್ಪಣಿ :**

೧೩. ಬಿ.ಎಸ್. ಖೂಬಾ "ಪುರಸ್ಕಾರ" – ೧೯೯೬ (ಪು.೪೯)
೧೪. --ಅದೇ- (ಪು.೯೦)
೧೫. -ಅದೇ- (ಪು.೯೩)
೧೬. ಬಿ.ಎಸ್. ಖೂಬಾ "ಪುರಸ್ಕಾರ" – ೧೯೯೬ (ಪು.೯೫)

ನನಸಾಗದೆ ಶ್ರೀಮಂತರ ಓಣಿಯಲ್ಲಿ ಮನೆ ಸಿಗದಂತಾಗಿ ಕೊನೆಗೆ ಧರ್ಮಶಾಲೆಯಲ್ಲಿ ಬಂದು ಇರಬೇಕಾಗುತ್ತದೆ. ಇಲ್ಲಿ ಬಡವ ಮತ್ತು ಶ್ರೀಮಂತರ ಮಧ್ಯದಲ್ಲಿರುವ ಭೇದವನ್ನು ವ್ಯಕ್ತಗೊಳಿಸುವ ಪ್ರಸಂಗವನ್ನು ತೋರುವ ಕಥೆಯಾಗಿದೆಯದು.

ಈ ಕಥೆಯ ಕಥಾನಾಯಕನಾದ ತ್ರಿಶಂಕು ಓರ್ವ ಸಣ್ಣ ಶಾಲೆಯ ಶಿಕ್ಷಕನಾಗಿದ್ದು ಸರಳ ಜೀವನ ಪಾಲಿಸುವುದರ ಜೊತೆಗೆ ತನಗೆ ದೊರೆತ್ತಿದ್ದರಲ್ಲೇ ಸಂತುಷ್ಟನಾಗಿರುತ್ತಿದ್ದನು. ಆದರೆ ಪ್ರತಿಯೊಬ್ಬ ಮನುಷ್ಯನಿಗೆ ತನ್ನದೆಯಾದ ಬಯಕೆಗಳಿರುವಂತೆ ತ್ರಿಶಂಕುವಿಗೆ ಕೂಡ ಒಂದು ಬಯಕೆ ಕಾಡುತ್ತಿತ್ತು. ಅದನ್ನು ಈಡೇರಿಸಿಕೊಳ್ಳಲು ಒಳ್ಳೆಯ ಅವಕಾಶಕ್ಕಾಗಿ ದಾರಿ ಕಾಯುತ್ತಿದ್ದ. ಅದಕ್ಕಾಗಿಯೇ ಮಕ್ಕಳಿಗೆ ಪ್ರೀತಿಯಿಂದ ಬೋಧಿಸುತ್ತಿದ್ದನು. ಒಮ್ಮೆ ಒಬ್ಬ ದಡ್ಡ ವಿದ್ಯಾರ್ಥಿಯನ್ನು ಜಾಣನ್ನಾಗಿ ಮಾಡಿದಕ್ಕಾಗಿ ಆ ಹುಡುಗನ ತಂದೆ "ಮಕ್ಕಳಿಗೆ ಒಬ್ಬ ತಂದೆ ಜನ್ಮದಾತನಾಗಿದ್ದರೆ, ಇನೊಬ್ಬ ತಂದೆ ವಿದ್ಯಾವಂತನಾಗಿರುತ್ತಾನೆ."[೧೭] ಅದರಿಂದ ಋಣ ಮುಕ್ತನಾಗಲು ದಡ್ಡ ಹುಡುಗನ ತಂದೆ ತ್ರಿಶಂಕುವಿಗೆ ಏನಾದರು ಕೇಳಿ ಕೊಡುತ್ತೇನೆಂದಾಗ ತ್ರಿಶಂಕುವಿಗೆ ಈ ಸದವಕಾಶ ಸದುಪಯೋಗ ಪಡಿಸಿಕೊಂಡು ತನ್ನ ಆಕಾಂಕ್ಷೆಗಳನ್ನು ಅವರ ಮುಂದಿಟ್ಟನು. ಆದರೆ ದುಡ್ಡಿದ್ದವನೇ ದೊಡ್ಡಪ್ಪ ಎಂಬಂತೆ ಹಣದ ದರ್ಪದಲ್ಲಿ ಇವನ ಸರಳ ಬದುಕಿಗೆ ಇಂದಿನ ಆಡಂಬರದ ಸಮಾಜವು ಸ್ಪಂದಿಸದೆ, ಬೆಲೆ ಕೊಡದೆ ತಿರಸ್ಕರಿಸುವುದು. ಇಲ್ಲಿ ಗಮನಾರ್ಹ. ದುಡ್ಡಿರದಿದ್ದರೆ ಯಾವ ಕ್ಷೇತ್ರದಲ್ಲೂ ಗೌರವ ಸಿಗುವುದು ಅತಿವಿರಳ ಮತ್ತು ದೃಷ್ಟಕರವಾದುದು ಕೊನೆಗೆ ತನ್ನ ಬಯಕೆ ಇಡೇರದೆ, ಇತ್ತಕಡೆ ಇದ್ದ ಚಿಕ್ಕ ಮನೆಯು ಕಳೆದುಕೊಂಡು ಧರ್ಮಶಾಲೆಯಲ್ಲಿಯೇ ವಾಸಿಸಬೇಕಾದ ಪ್ರಸಂಗವು ನಿರ್ಮಾಣವಾಗುತ್ತದೆ.

'ಇನಾಮು'[೧೮] ಈ ಕಥೆಯಿಂದ ತಿಳಿದು ಬರುವುದೇನೆಂದರೆ ಚಿಕ್ಕ ಮಕ್ಕಳು ಕೂಡ ಬಹಳ ಸಂವೇದನ ಶೀಲರಾಗಿರುತ್ತಾರೆ. ಈ ಕಥೆಯಲ್ಲಿ ಬರುವ ಹುಡುಗನು ತನ್ನ ತಂದೆಯು ತನ್ನ ತಾಯಿಯನ್ನು ಬಿಟ್ಟು ಬೇರೆ ಸ್ತ್ರೀಯ ಜೊತೆಗೆ ಸಂಪರ್ಕವಿದ್ದುದ್ದನ್ನು ತಪ್ಪಿಸಲು ಯೋಚಿಸಿರುವ ಸುಂದರ ಉಪಾಯವು ಈ ಕಥೆಯಲ್ಲಿ ಅಡಕವಾಗಿದೆ. ಹಿರಿಯರ ಮಾಡಿದ ತಪ್ಪನ್ನು ಮಕ್ಕಳು ಕೂಡ ತಿದ್ದಬಹುದಾಗಿದೆ.

'ಚಿಕ್ಕಮ್ಮ' ಮತ್ತು 'ಇನಾಮು' ಕಥೆಗಳಲ್ಲಿ ಮಕ್ಕಳ ನಿರ್ಮಲ ಮನಸ್ಸು ಕಾಣಸಿಗುತ್ತದೆ. ಚಿಕ್ಕ ಒಂದು ಘಟನೆಯೂ ಕೂಡ ಇದ್ದರೂ ಮಕ್ಕಳಿಗೆ ನಾವು ಸ್ಪಂದಿಸದೆ ಹೋದಾಗ ಮುಗ್ಧ ಕಂದಗಳ ಮನಸ್ಸಿಗೆ ಆದ ಆಘಾತ, ನೋವು ಹೇಳತಿರದು. ಆದ್ದರಿಂದ ಹೂವಿನಂತಿರುವ

**ಅಡಿ ಟಿಪ್ಪಣಿ :**

೧೭. ಬಿ.ಎಸ್. ಖೂಬಾ "ಪುರಸ್ಕಾರ" – ೧೯೯೬ (ಪು.೯೬)

೧೮. --ಅದೇ- (ಪು.೫೯)

ಮಕ್ಕಳಿಗೆ ನಾವು ಅವರ ಬೆಳವಣಿಗೆಗೆ ಸೂಕ್ತ ಮಾರ್ಗದರ್ಶನ ನೀಡುತ್ತ ಅನುಭವದ ಹಿರಿಮೆ ಕಾಣುತ್ತೇವೆ.

ಒಟ್ಟಿನಲ್ಲಿ 'ಪುರಸ್ಕಾರ' ಕಥಾ ಸಂಕಲನವು "ಭೌಮಾಕಾರದಲ್ಲಿ ಬೆಳೆದು ನಿಂತಿರುವ ಹಿಂದೀ ಕಥಾ ಸಾಹಿತ್ಯದಲ್ಲಿಯ ಅತ್ಯಂತ ಮಹತ್ವವನ್ನು ಪಡೆದಿರುವ ಮತ್ತು ಸರ್ವಕಾಲಿಕ ಮೌಲ್ಯದಿಂದ ಉಜ್ವಲವೆನಿಸಿಕೊಂಡಿರುವ ಪ್ರತಿನಿಧಿ ಕಥೆಗಳನ್ನು ಕನ್ನಡಕ್ಕೆ ಅನುವಾದಿಸಿ ಕನ್ನಡಿಗರಿಗೂ ಹಿಂದಿ ಕಥಾಸಾಹಿತ್ಯದ ರಸಾನುಭೂತಿ ಮಾಡಿಸಬೇಕೆಂಬ ಹೆಬ್ಬಯಕೆ"[೧] ಯಿಂದ ಪ್ರೇರಿತನಾಗಿ ಬಂಡೆಪ್ಪ ಖೂಬಾ ಅವರು ಈ ಕಥಾ ಸಂಕಲನವನ್ನು ರಚಿಸಿದ್ದಾರೆ.

ಒಂದು ಭಾಷೆಯಲ್ಲಿ ಸೃಷ್ಟಿಗೊಂಡ ಈ ಒಂದು ಕೃತಿ. ಅದನ್ನು ಇನ್ನೊಂದು ಭಾಷೆಗೆ ತರುವಾಗ ಅದು ಪುನರ ಸೃಷ್ಟಿಗೊಳ್ಳಬೇಕಾಗುತ್ತದೆ. ಒಂದು ನೆಲ, ಆ ನೆಲದ ಮೇಲೆ ಬದುಕುವ ಒಂದು ಜನಾಂಗ, ಆ ಜನಾಂಗದ ಸಂಸ್ಕೃತಿಯ ರಕ್ತ, ಮಾಂಸ ಪಡೆದುಕೊಂಡು ಸಂಕೀರ್ಣವಾಗಿ ಸೃಷ್ಟಿಯಾಗಿರುತ್ತದೆ. ಇಂತಹ ಸಂಕೀರ್ಣ ಸೃಷ್ಟಿಯನ್ನು ಬೇರೊಂದು ಭಾಷೆಗೆ ತಂದುಕೊಡುವುದು ಸುಲಭದ ಕಾರ್ಯವಲ್ಲ. ಅನುವಾದಕನಿಗೆ ಕನಿಷ್ಟ ಎರಡು ಭಾಷೆಯಲ್ಲಿ ಪರಿಣಿತಿ ಇರಬೇಕು. ಎರಡೂ ಭಾಷೆಯ ಭಾಷಾ ರಚನೆ, ವ್ಯಾಕರಣ, ಛಂದಸ್ಸು, ಶಬ್ಧ ಶಾಸ್ತ್ರಗಳೆಲ್ಲವು ಬಲ್ಲವನಾಗಿರಬೇಕು. ಅಂದಾಗ ಮಾತ್ರ ಅನುವಾದ ಕಾರ್ಯ ಸುಗಮವಾಗುವುದು. ಲೇಖಕನಿಗಿಂತಲೂ ಅನುವಾದಕನ ಜವಾಬ್ದಾರಿ ದೊಡ್ಡದು. ಏಕೆಂದರೆ ಅನುವಾದಕನು ಪರಕಾಯ ಪ್ರವೇಶ ಮಾಡಬೇಕಾಗುವುದು.

ಭಾಷಾಂತರವು ಮಾಡುವಾಗ ಮೂಲ ಕೃತಿಕಾರನಲ್ಲಿಳಿದು ಅವನ ಭಾವನೆ, ಚಿಂತನೆ, ಅನಿಸಿಕೆಗಳನ್ನು ಯಥಾವತ್ತಾಗಿ ಗ್ರಹಿಸಿ ತನ್ನ ಭಾಷೆಗೆ ತಂದುಕೊಳ್ಳುವ ತಾಳ್ಮೆ, ಜಾಣ್ಮೆ ಅನುವಾದಕನಲ್ಲಿರಬೇಕು. ಮುಖ್ಯವಾಗಿ ಅನುವಾದದಲ್ಲಿ ಮೂಲದ ಬಹಳಷ್ಟು ಬೆಡಗು, ಬಿನ್ನಾಣುಗಳು, ಸೋರಿ ಹೋದರು, ಭಾಷಾಂತರ ಮಾಡಿದ್ದು ಓದಿದಾಗ ಮೂಲ ಕೃತಿಯನ್ನು ಓದಿದಾಗಿನ ಪರಿಣಾಮ ರಮಣಿಯತೆ ಸಹಜವಾಗಿ ಉಂಟಾಗಬೇಕು. ಭಾಷಾಂತರದ ಮೈಯಲ್ಲಿ ಮೂಲದ ವಸ್ತು ಭಾವ, ಶೈಲಿಗಳು ಸಾಧ್ಯವಿರುವಷ್ಟು ಸ್ಫೋಟಗೊಳ್ಳಬೇಕು. ಆದುದರಿಂದ ಭಾಷಾಂತರವು ಕೇವಲ ಕಲೆಯಲ್ಲ, ಪ್ರಜ್ಞಾ ಪೂರ್ವಕ ಕಲೆ. ಈ ಮಾತುಗಳನ್ನು ಮುಂದಿಟ್ಟುಕೊಂಡು ಬಂಡೆಪ್ಪಾ ಖೂಬಾರ ಭಾಷಾಂತರ ಕಲೆಯ ಮೌಲ್ಯಮಾಪನ ಮಾಡುವುದು ಒಳ್ಳೆಯದು ಎನಿಸುತ್ತದೆ.

---

**ಅಡಿ ಟಿಪ್ಪಣಿ :**

೧೯. ಬಿ.ಎಸ್. ಖೂಬಾ "ಪುರಸ್ಕಾರ" – ೧೯೯೬ (ಪ್ರಸ್ತಾವನೆಯಲ್ಲಿ)

ಒಟ್ಟಿನಲ್ಲಿ ಬಂಡೆಪ್ಪ ಖೂಬಾ ಅವರ ಅನುವಾದಿತ ಕಥೆಗಳನ್ನು ಗಮನಿಸಿದರೆ, ಅವರನ್ನು ಒಬ್ಬ ಶ್ರೇಷ್ಠ ಅನುವಾದಕ ರೆನ್ನಬಹುದು. ಹಿಂದೀ ಭಾಷೆಯಲ್ಲಿನ ಭಾವಗಳನ್ನು, ಆ ಅನುಭವಗಳನ್ನು ಆ ಭಾಷೆಯನ್ನು ತಿಳಿದವರಾದ ಇವರು ಕನ್ನಡಿಗರಿಗೂ ತಿಳಿಯುವಂತೆ, ಕನ್ನಡ ಜಾಯಮಾನಕ್ಕೆ ಬಗ್ಗುವಂತೆ ವರ್ಗಾಯಿಸಿರುವುದು ಇಲ್ಲಿ ಮಹತ್ವದ್ದಾಗಿದೆ. ಮೂಲ ಕೃತಿಯನ್ನು ಚೆನ್ನಾಗಿ ಗ್ರಹಿಸಿರುವುದರೊಂದಿಗೆ, ಮೂಲ ಲೇಖಕನ ಆಶಯ, ಅಭಿವ್ಯಕ್ತಿ ವಿಧಾನವನ್ನು ಗಮನಿಸಿ, ಸೂಕ್ತವಾದ ಸಮಾನವಾದ ಅರ್ಥವುಳ್ಳ ಪದಗಳನ್ನು ಬಳಸಿ, ಶಬ್ದಕೋಶವನ್ನು ಪರಿಶೀಲಿಸಿ, ಸಾಂಸ್ಕೃತಿಕ ಹಿನ್ನೆಲೆಯುಳ್ಳ ಪದಗಳನ್ನು, ಭಾಷೆಯ ಜಾಯಮಾನಕ್ಕನು ಗುಣವಾಗಿ ಅನುವಾದ ಕಾರ್ಯ ಮಾಡಿರುವುದು ಇಲ್ಲಿ ಎಲ್ಲೆಲ್ಲೂ ಎದ್ದು ಕಾಣುತ್ತದೆ. ಪರಿಜ್ಞಾನವಿಲ್ಲದ ವಿಷಯಗಳ ಬಗ್ಗೆ ಪರಾಮರ್ಶನ ಮಾಡಿ ಕೃತಿ ರಚನೆಯೊಂದರ ಅನುವಾದಕ್ಕೆ ಬೇಕಾಗಬಹುದಾದ ನೀತಿ–ನಿಯಮಗಳ ಚೌಕಟ್ಟನ್ನು ಹಾಕಿಕೊಂಡು, ತಮ್ಮದೇ ಆದ ಶ್ರದ್ಧೆ, ಜಿಜ್ಞಾಸೆ ನಮ್ರತೆ, ಶ್ರಮಗಳನ್ನು ಕಾಳಜೀ ಪೂರ್ವಕವಾಗಿ ಬಳಸಿಕೊಂಡ, ಅನುವಾದ ಮಾಡಿರುವುದು ಅವರೊಬ್ಬ ಶ್ರೇಷ್ಠ ಅನುವಾದಕನೆಂದುದನ್ನು ಸಾರುತ್ತದೆ. ಶ್ರೇಷ್ಠ ಅನುವಾದಕನಲ್ಲಿರಬೇಕಾದ ಮೇಲೆ ಕಾಣಿಸುವ ಹಲವು ವಿಶಿಷ್ಟ ಗುಣಗಳು ಶ್ರೀ ಬಂಡೆಪ್ಪ ಖೂಬಾ ಅವರಲ್ಲಿದ್ದು, ಅವರ ಅನುವಾದ ರಚನೆಗಳು ಆದಷ್ಟುಮಟ್ಟಿಗೆ ಓದುಗನಿಗೆ ತಾನೊಂದು ಅನುವಾದವನ್ನು ಓದುತ್ತಿದ್ದೇನೆಂಬ ಕಲ್ಪನೆ ಬರದಂತೆ ರಚನೆಯಾಗಿರುವುದು ಗಮನಾರ್ಹ ಅಂಶ. ತಮ್ಮ ಈ ಅನುವಾದ ಕಲೆಯ ಮೂಲಕ ಓದುಗರಲ್ಲಿ ಖೂಬಾ ಅವರು ಅನ್ಯ ಸಂಸ್ಕೃತಿಯ ಬಗೆಗೆ ತಾದಾತ್ಮ್ಯ ಭಾವನೆಯನ್ನು ಬೆಳೆಸಲು ಪ್ರಯತ್ನಿಸಿದ್ದಾರೆ. ಎರಡು ವಿಭಿನ್ನ ಸಂಸ್ಕೃತಿಗಳ ಮಾನವರನ್ನು ಪರಸ್ಪರ ಹತ್ತಿರಕ್ಕೆ ತಂದಿದ್ದಾರೆ ಎಂದು ಹೇಳಬಹುದು.

*** 'ಬಿಂಬ ಪ್ರತಿಬಿಂಬ'[೨೦]**

ಬಂಡೆಪ್ಪ ಖೂಬಾ ಎರಡನೇಯ ಕಥಾಸಂಕನ. ೧೯೯೭ರಲ್ಲಿ ಪ್ರಕಟಗೊಂಡಿರುವ ಇದರಲ್ಲಿ ಎಂಟು ಕಥೆಗಳಿವೆ ಅವುಗಳೆಂದರೆ.

| ಕಥೆಯ ಹೆಸರು | | ಮೂಲ ಲೇಖಕರು |
|---|---|---|
| ೧. ನಂದಿದ ಜ್ಯೋತಿ | – | ಪಂಡಿತ ಗೋವಿಂದ ವಲಭಪಂತ |
| ೨. ಸಾವಿನಿಂದ ಬಿಡುಗಡೆ | – | ಬಿ.ಎಸ್. ಖೂಬಾ |
| ೩. ಧೂಳಪ್ಪನ ಧರ್ಮಸಂಕಟ | – | ,, |
| ೪. ದುಃಖ | – | ಯಶಪಾಲ |
| ೫. ತೀರ್ಮಾನ | – | ವಿನೋದ ರಸ್ತೋಗಿ |
| ೬. ಅಂತಿಮ ನಿರ್ಧಾರ | – | ಬಿ.ಎಸ್. ಖೂಬಾ |
| ೭. ಮಗಳು–ಸೊಸೆ | – | ವಿನೋದ ರಸ್ತೋಗಿ |
| ೮. ವಿಚಿತ್ರ ಸತ್ಯ | – | ಬಿ.ಎಸ್. ಖೂಬಾ |

**ಅಡಿ ಟಿಪ್ಪಣಿ** :

೨೦. ಬಿ.ಎಸ್. ಖೂಬಾ "ಬಿಂಬ ಪ್ರತಿಬಿಂಬ" –– ೧೯೯೬ (ಮುನ್ನುಡಿ)

ಇಲ್ಲಿ ಹಿಂದೀ ಭಾಷೆಯಿಂದ ಅನುವಾದಿತಗೊಂಡಿರುವ ನಾಲ್ಕು ಕಥೆಗಳಿದ್ದರೆ, ನಾಲ್ಕು ಸ್ವತಃ ಬರೆದಿರುವ ಕಥೆಗಳು ಇವೆ.

'ನಂದಿದ ಜ್ಯೋತಿ'[೨೧] ಕಥೆಯಲ್ಲಿ ಕೇಂದ್ರ ಬಿಂದುವಾದ 'ಜ್ಯೋತಿ' ತನ್ನ ಆಶೆ ಆಕಾಂಕ್ಷೆಗಳಿಗೆ ಕಟುಬಿದ್ದು, ತಂದೆಯ ಪ್ರಾಮಾಣಿಕತೆಗೆ ಬೆಲೆ ಕಟ್ಟುವಂತಾಗುತ್ತದೆ. ಅದಕ್ಕಾಗಿ ಯಥಾರ್ಥ ಜೀವನದಲ್ಲಿ ಬಡವರ ಶ್ರೀಮಂತರ ಸಾಮಾಜಿಕ ಏರು-ಪೇರುಗಳ ದುರಂತಕ್ಕೆ ಈ ಕಥೆ ಎಡೆಮಾಡಿಕೊಡುತ್ತದೆ. ಇಲ್ಲಿ ಜ್ಯೋತಿಯು ಜೀವನವನ್ನು ಎದುರಿಸುವ ಧೈರ್ಯ ಕಳೆದುಕೊಂಡಿರುವುದೇ ಈ ದುರಂತಕ್ಕೆ ಎಡೆ ಮಾಡಿಕೊಡುತ್ತದೆ. ನಿಜವಾದ ರೀತಿಯಲ್ಲಿ ಜ್ಯೋತಿಯಲ್ಲಿ ಧೈರ್ಯವಿದ್ದರೆ ಬದುಕಬಹುದಾಗಿತ್ತು. ಆದರೆ ಅದನ್ನು ಕಳೆದುಕೊಳ್ಳುತ್ತಾಳೆ ಎಂಬುದು ಇಲ್ಲಿ ಗಮನಿಸಬೇಕಾದ ಅಂಶ. ಇಂದು ಸಮಾಜದಲ್ಲಿ ಜ್ಯೋತಿಯಂತೆ ಅನೇಕ ಜನರು ಬಲಿಯಾಗುವುದನ್ನು ಕಾಣಬಹುದು. ಹೀಗಾಗಿ ಜ್ಯೋತಿ ಜೀವನದಿಂದ ಶಾಶ್ವತವಾಗಿ ನಂದಿ ಹೋಗುತ್ತಾಳೆ.

'ದುಃಖ'[೨೨] ಕಥೆಯಲ್ಲಿ 'ದೀಲಿಪ ಹೇಮಾ' ಎಂಬ ದಂಪಗಳಿದ್ದು, ಸಣ್ಣ ವಿಷಯದ ಕಾರಣ ದುಃಖದಿಂದ ಗಂಡನ ಮನೆ ತೊರೆದು ಹೆಂಡತಿ ತವರುಮನೆಗೆ ಹೋಗುತ್ತಾಳೆ. ತನ್ನ ಹೆಂಡತಿಯ ಕುರಿತು ದಿಲೀಪನು " ದೇವರ ದಯೆಯಿಂದ ದುಃಖವೆಂದರೇನು? ಎಂಬುದನ್ನು ನೀನು ತಿಳಿದು ಕೊಂಡಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು? ನಿನ್ನ ರಸಭರಿತ ದುಃಖವು ನಿನಗೆ ಸಿಗದಿದ್ದರೆ ನಿನ್ನ ಜೀವನವು ಅಸಹ್ಯವಾಗಿ ಬಿಡುತ್ತಿತ್ತು"[೨೩] ಎಂದು ಹೇಳುತ್ತ ಕಥೆಯನ್ನು ಕೊನೆಗೊಳಿಸುವಲ್ಲಿ ಲೇಖಕನ ಪ್ರಾಮಾಣಿಕತೆ ಎದ್ದು ಕಾಣುತ್ತದೆ. ನಿಜವಾದ ದುಃಖದ ಸ್ವರೂಪವನ್ನು ಓದುಗನಿಗೆ ಬಿಚ್ಚುಕೊಡುತ್ತದೆ.

'ತೀರ್ಮಾನ'[೨೪] ಕಥೆಯಲ್ಲಿ ತನ್ನ ಬಾಳ ಸಂಗಾತಿಯನ್ನು ಆಯ್ಕೆ ಮಾಡುವಾಗ ಸ್ತ್ರೀಯು ತೋರುವ ಜಾಣ್ಮೆಯು ಅಡಕವಾಗಿದೆ. ಶ್ರೀಮಂತಿಕೆಗೆ ಮಾರುಹೋಗುವ ಹೆಚ್ಚು ಜನರನ್ನು ಇಂದು ಕಾಣುತ್ತೇವೆ. ಆದರೆ ಇಲ್ಲಿ ಪ್ರೇಮಕ್ಕೆ ಶ್ರೀಮಂತಿಕೆಯು ಸೋಲುತ್ತದೆ. ಮನಸ್ಸಿನ ಶ್ರೀಮಂತಿಕೆ ಮಾತ್ರ ಗೆಲ್ಲುತ್ತದೆ ಎಂಬುದನ್ನು ಈ ಕಥೆಯು ವಿವರಿಸುತ್ತದೆ.

ಈ ಕಥೆಯ ನಾಯಕಿಯಾದ ಸಿಮಾಳಿಗೆ ಶೇಖರ ಮತ್ತು ಸರನ ಎಂಬ ಗೆಳೆಯರಿದ್ದು ಜೀವನ ಸಂಗಾತಿಯಾಗಿ ಯಾರನ್ನು ಆಯ್ಕೆ ಮಾಡಲಿ? ಎಂದು ನಿರ್ಧರಿಸುವಲ್ಲಿ ಗೊಂದಲಕ್ಕೆ ಸಿಲುಕುತ್ತಾಳೆ. ಜೀವನದಲ್ಲಿ ಆಯ್ಕೆ ಎಂಬುದು ಏಕ ಆಯ್ಕೆಯಾಗಿರುವುದರಿಂದ ಸೀಮಾಳ

**ಅಡಿ ಟಿಪ್ಪಣಿ ।**

೨೧. ಬಿ.ಎಸ್. ಖೂಬಾ "ಬಿಂಬ-ಪ್ರತಿಬಿಂಬ"-೧೯೯೭ (ಪುಟ-೦೧)
೨೨. ಬಿ.ಎಸ್. ಖೂಬಾ "ಬಿಂಬ-ಪ್ರತಿಬಿಂಬ"-೧೯೯೭ (ಪುಟ-೩೯)
೨೩. -ಅದೇ- (ಪುಟ ೪೬)
೨೪. -ಅದೇ- (ಪುಟ ೪೭)

ತೀರ್ಮಾನವೇ ಅಂತಿಮ ತೀರ್ಮಾನವಾಗುತ್ತದೆ. ಭೌತಿಕ ಬೆಡಗಿಗೆ ಮಾರುಹೋಗದೆ ಐಶ್ವರ್ಯ, ಅಂತಸ್ಥಿಗೆ ಬೆಲೆ ನೀಡದೆ ಪ್ರೀತಿಗೆ ಬೆಲೆಕೊಟ್ಟು ಕೊನೆಗೆ "ನಾನು ಪತ್ನಿಯಾಗ ಬಯಸುತ್ತೇನೆ. ಮನೆಯ ಸೊಸೆಯಾಗಬಯಸುತ್ತೇನೆ. ಆದ್ದರಿಂದ ನನ್ನ ತೀರ್ಮಾನ ಹೀಗಿದೆ"[೨೫] ಎಂದು ಹೇಳಿರುವ ಮಾತು ಮಾನ್ಯ ಮಾಡುವಂತಹದ್ದು.

'ಮಗಳು ಸೊಸೆ'[೨೬] ಕಥೆಯು ಇಂದಿನ ಸಮಾಜದಲ್ಲಿ ಯಾರೇ ಆಗಲಿ ಸ್ವತಃ ಮಗಳನ್ನು ಕಂಡಂತೆ ಸೊಸೆಯನ್ನು ಕಾಣಲಾರರು ಎಂಬ ಸಂಗತಿಗೆ ನೀಡುತ್ತದೆ. ಇದರಿಂದ ಕೌಟುಂಬಿಕ ಜೀವನವು ಸಮಸ್ಯೆಗೊಳಗಾಗಿ ನೆಮ್ಮದಿಯು ಹೇಗೆ ಕಳೆದುಹೋಗುತ್ತದೆ? ಎಂಬುದನ್ನು ತಿಳಿಸುವುದೇ ಈ ಕಥೆಯ ಮುಖ್ಯ ಉದ್ದೇಶ.

ಈ ಕಥೆಯ ಮುಖ್ಯ ಪಾತ್ರವಾದ ಜೀವನಲಾಲನು "ಇಂದಿನ ಯುಗದಲ್ಲಿ ದುಡ್ಡೇ ಮೂಗು ಮತ್ತು ಮೀಸೆಯಾಗಿದೆ. ಯಾರ ಹತ್ತಿರ ದುಡ್ಡು ಇರುವುದಿಲ್ಲವೋ ಅವರು ಮೂಗು ಮೀಸೆಗಳಿದ್ದರೂ ಮುಕ್ಕುಡರು ಮತ್ತು ಮೀಸೆ ಬೆಳೆಸಿಕೊಂಡರೆವನೆನಿಸಿಕೊಳ್ಳುತ್ತಾರೆ ಎಂದು ಭಾವಿಸಿರುತ್ತಾನೆ. ಅಷಾಡ ಮಾಸದಲ್ಲಿ ತನ್ನ ಸೊಸೆಯನ್ನು ತವರು ಮನೆಗೆ ಕಳುಹಿಸದೆ ದರ್ಪದಿಂದ ವರ್ತಿಸುತ್ತಿರುವಾಗ ತನ್ನ ಮಗಳನ್ನು ಕರೆ ತರದೆ ಹಾಗೆಯೇ ಬಂದ ಮಗನನ್ನು ನೋಡಿ ಅವನಲ್ಲಿ ಮನುಷತ್ವದ ಅರಿವು ಎಚ್ಚರಗೊಳ್ಳುತ್ತದೆ. ಹೆಂಡತಿ ರಾಜೇಶ್ವರಿಯು ನೀವು ಸೊಸೆ ಮತ್ತು ಮಗಳನ್ನು ಸಮಾನಭಾವನೆಯಿಂದ ಎಲ್ಲಿಯವರೆಗೆ ಕಾಣವುದಿಲ್ಲವೋ? ಅಲ್ಲಿಯವರೆಗೆ ನಿಮಗೆ ಸುಖಃ ಮತ್ತು ಶಾಂತಿ ಸಿಗಲಾರದು ಎಂದು ಹೇಳುವ ಬುದ್ದಿ ಮಾತಿಗೆ ಜೀವನಲಾಲನು ಸಮ್ಮತಿಸಿ "ಒಮ್ಮೊಮ್ಮೆ ಗಾಯವೂ ಕೆಲಸ ಮಾಡುತ್ತದೆ"[೨೭] ಎಂದು ಮನವರಿಕೆ ಮಾಡಿಕೊಳ್ಳುತ್ತಾನೆ. ಕೊನೆಗೆ ರಾಜೇಶ್ವರಿಯ ಮುಖಾಂತರ ಪ್ರತಿಯೊಬ್ಬ ಮಗನ ತಂದೆಯೂ ತಾನೊಬ್ಬ ಮಗಳ ತಂದೆಯೂ ಆಗಿದ್ದೇನೆ ಎಂದು ಸಮಭಾವದಿಂದ ನೋಡಬೇಕು. ಸೊಸೆಯನ್ನು ಮಗಳ ರೂಪದಲ್ಲಿ ಕಾಣಬೇಕು ಎಂದು ಜನತೆಗೆ ನೀಡಿರುವ ಸಂದೇಶ. ಇಲ್ಲಿ ಅಡಕವಾಗಿರುವುದು ಮುಖ್ಯವೆನಿಸುತ್ತದೆ, ಮೌಡ್ಯ ಜನರನ್ನು ತಿದ್ದುವ ದೃಷ್ಟಿಯಲ್ಲಿ ಈ ಕಥೆ ಪ್ರಮುಖವಾಗುತ್ತದೆ. ಹೀಗೆ ನಾಲ್ಕು ಹಿಂದೀ ಭಾಷೆಯ ಏಕಾಂಕಿಗಳನ್ನು ಕಥಾ ರೂಪಕ್ಕೆ ಅಳವಡಿಸಿ ಕಥೆಗಳನ್ನು ವಸ್ತು ಭಾಷೆ ಶೈಲಿಯ ದೃಷ್ಟಿಯಿಂದ ಪರಿಣಾಮಕಾರಿಯಾಗಿ ಯಾಗುವಂತೆ ಅನುವಾದಿಸಿರುವುದು ಖೂಬಾರವರ ಶ್ರೇಷ್ಠತೆ ಎನ್ನಬಹುದು. ಈ ಮೂಲಕ ಅನುವಾದ ಸಾಹಿತ್ಯದಲ್ಲಿ ಖೂಬಾರ ಸ್ಥಾನವು ಪ್ರಮುಖವಾಗುತ್ತಿದ್ದು ಅವರನ್ನು ಒಬ್ಬ ಉತ್ತಮ ಅನುವಾದಕರೆಂದು ಪರಿಗಣಿಸಬಹುದು.

**ಅಡಿ ಟಿಪ್ಪಣಿ ।**

೨೫. ಬಿ.ಎಸ್. ಖೂಬಾ "ಬಿಂಬ-ಪ್ರತಿಬಿಂಬ"-೧೯೯೭ (ಪು ೫೮)
೨೬. ಬಿ.ಎಸ್. ಖೂಬಾ "ಬಿಂಬ-ಪ್ರತಿಬಿಂಬ"-೧೯೯೭ (ಪು ೬೫)
೨೭. ಬಿ.ಎಸ್. ಖೂಬಾ "ಬಿಂಬ-ಪ್ರತಿಬಿಂಬ"-೧೯೯೭ (ಪು ೬೪)

ಅಧ್ಯಾಯ: ಐದು

## ಕಥೆಗಾರರಾಗಿ ಬಂಡೆಪ್ಪ ಖೂಬಾ

ಬಂಡೆಪ್ಪ ಖೂಬಾ ಅವರ ಸ್ವಂತ ಕಥೆಗಳು ಸಂಖ್ಯೆಯ ದೃಷ್ಟಿಯಿಂದ ಕಡಿಮೆಯಿದ್ದರೂ, ಸತ್ವದ ದೃಷ್ಟಿಯಿಂದ ಪ್ರಧಾನವಾಗುತ್ತವೆ. ಅವು ಕವಿಯ ಮನಸ್ಸಿನ ಮೇಲೆ ಗಾಢವಾದ ಪ್ರಭಾವವನ್ನು ಬೀರಿರುವ ಸತ್ಯಘಟನೆಗಳನ್ನೇ ಆಧಾರವಾಗಿಟ್ಟುಕೊಂಡು ಬರೆದಿರುವಂತಹವುಗಳಾಗಿದ್ದು, ಸೊಗಸಾಗಿವೆ. ಈ ಕಥೆಗಳಿಗೆ ಮೂಲ ಪ್ರೇರಣೆ ಅವರ ಜೀವನದಲ್ಲಿ ನಡೆದು ಹೋದ ಘಟನೆಗಳು. ಅವರ ಬದುಕು ಸಂಘರ್ಷಮಯವಾದುದು. ಆದ್ದರಿಂದಲೇ ಸಂಘರ್ಷಮಯವಾದ ಸಂಸ್ಕೃತಿಯನ್ನು ಪ್ರತಿಪಾದಿಸಿರುವ ಹಾಗೂ ಸಂಘರ್ಷದಿಂದ ಕೂಡಿದ ಬದುಕಿನ ವಸ್ತುವನ್ನೇ ಕಥೆಗಳಿಗೆ ಆಯ್ದುಕೊಂಡಿದ್ದಾರೆ. ಅವರು ಕಟ್ಟಬಯಸಿದ ಕಥೆಗಳ ರೀತಿ ಇಲ್ಲಿ ನೇರವಾಗಿ ವ್ಯವಸ್ಥೆಯನ್ನು ತಿರಸ್ಕರಿಸುವುದಲ್ಲ. ಅದನ್ನು ವಿವರಿಸುತ್ತ ಆ ಮೂಲಕ ಅದನ್ನು ಅರ್ಥಪೂರ್ಣವಾಗಿ ಬಿಚ್ಚಿ ತೋರಿಸುವುದಾಗಿದೆ. ಇಲ್ಲೆಲ್ಲಾ ಅವರ ನೈತಿಕ ಸಿಟ್ಟು ಮೌನವಾಗಿ ತಳಮಳಿಸುತ್ತದೆ. ಸಮಾಜವನ್ನು ಸ್ಪಂದಿಸುವ ರೀತಿಯು ಮೂಕ ಅನುಭವಿಸಿದ ನೋವಿನಂತೆ ಇದು ಅವರು ಚಡಪಡಿಸುವುದನ್ನು ಇಲ್ಲಿ ಗುರುತಿಸಬಹುದು.

ಬಂಡೆಪ್ಪನವರು ಕೇವಲ ವಸ್ತುವನ್ನು ತೀರ ಸಹಜವಾಗಿ ಕಾಣದೇ ಅದನ್ನು ಅನುಭವದ ಮೂಲಕ ಕಂಡಿದ್ದು, ಕಂಡ ಹಾಗೆ ಬರವಣಿಗೆಯಲ್ಲಿ ವಿವರಿಸುತ್ತಾರೆ. ಅದಕ್ಕಾಗಿಯೇ ಅವರ ಸ್ವಂತ ಕಥೆಗಳಲ್ಲಿ ಗಾಢವಾದ ಮಾನವ ಸಂಬಂಧಗಳನ್ನು ಸಂಸಾರದಲ್ಲಾಗುವ ಏರು ಇಳಿತಗಳನ್ನು ವ್ಯಕ್ತಿಯ ದುರ್ಬಲತೆ, ಸಣ್ಣತನ, ಮೋಸ, ಮಾನಸಿಕ ನೆಮ್ಮದಿ, ಕುಡಿತದ ದುಶ್ಚಟಗಳಿಗೆ ಬಲಿಯಾಗುವುದನ್ನು ಆಧ್ಯಾತ್ಮಿಕ ಒಲವು, ಸುಳ್ಳು ಸಾವು ಸತ್ಯ. ಮಾನವೀಯ ಮೌಲ್ಯಗಳ ಕಣ್ಮರೆ, ಮತ್ತು ನಾಸ್ತಿಕ ಜೀವನದ ವಿವರಗಳನ್ನು ಕಾಣಬಹುದು. ಅವರು ತೋರಿಸುವ ರೀತಿ ಜನಪರವಾದದ್ದು, ಕಥೆಗಳಲ್ಲಿ ಬದುಕಿನ ಅಂತರಂಗವನ್ನು ಶೋಧಿಸುತ್ತ, ಅದನ್ನು ಸರಳವಾಗಿ ತಿಳಿಸುವ ರೀತಿ ಸುಂದರವಾಗಿದೆ. ಹೀಗಾಗಿ ಇದು ಸಾಹಿತ್ಯದ ಯಾವುದೇ ಒಂದು ಘಟ್ಟಕ್ಕೆ ಸೀಮಿತವಾಗಿ ಉಳಿಯದೆ ಇಲ್ಲಿ ಸಮನ್ವಯತೆಯತ್ತ ಸಾಗುತ್ತಿರುವುದನ್ನು ಕಾಣಬಹುದು. ಈಗಾಗಲೇ ಪ್ರಕಟಿಸಿರುವ ಇವರ ಐದು ಕಥೆಗಳನ್ನು ತಮ್ಮ ಜೀವನದ ವಿವಿಧ ಸಂದರ್ಭಗಳಲ್ಲಿ ಬರೆದಿದ್ದಾರೆ.

ಇಲ್ಲಿ ಬರುವ ಧೂಳಪ್ಪ, ಸುರೇಶ, ವಿವೇಕ, ಸಂತೋಷ ಮತ್ತು ಜಿಮ್ಮ ಎಂಬ ಹೆಸರಿನ ವ್ಯಕ್ತಿಗಳೊಂದಿಗೆ ಒಂದಿಲ್ಲೊಂದು ರೀತಿಯಲ್ಲಿ ಕವಿಯು ಸಂಬಂಧ ಹೊಂದಿದ್ದಾರೆ. ಎಂಬುದನ್ನು ಕಥೆಗಳನ್ನು ಓದಿದಾಗ ಗೊತ್ತಾಗುತ್ತದೆ. ಕಥೆಗಳಲ್ಲಿ ಕೆಳವರ್ಗದ ವ್ಯಕ್ತಿಗಳ ನೋವು ನಲಿವುಗಳನ್ನು ದುಃಖ ದುಮ್ಮಾನಗಳನ್ನು ಕನಸುಗಳನ್ನು ಸಾಂಕೇತಿಕವಾಗಿ ಅಲ್ಲಲ್ಲಿ ಚಿತ್ರಿಸಿದ್ದಾರೆ.

**ಕಥೆಯ ಹೆಸರು**

| | | |
|---|---|---|
| ೧. ಧೂಳಪ್ಪನ ಧರ್ಮಸಂಕಟ | – | "ಬಿಂಬ ಪ್ರತಿಬಿಂಬ" ಕಥಾಸಂಕಲನದಲ್ಲಿ |
| ೨. ಸಾವಿನಿಂದ ಬಿಡುಗಡೆ | – | " |
| ೩. ಅಂತಿಮ ನಿರ್ಧಾರ | – | " |
| ೪. ವಿಚಿತ್ರ ಸತ್ಯ | – | " |
| ೫. ಜೀಮ್ಮನ ಕನಸು | – | "ವಚನಕ್ರಾಂತಿ" ದಿನಪತ್ರಿಕೆ |
| ೬. ನನ್ನ ತಮ್ಮ | – | "ರೇಖಾಚಿತ್ರ' |
| ೭. ನನ್ನ ತಂಗಿ | – | " |

'ಧೂಳಪ್ಪನ ಧರ್ಮಸಂಕಟ' [1] ಕಥೆಯಲ್ಲಿ ಆರ್ಥಿಕ ಹಿತಾಸಕ್ತಿಗಳು ಮತ್ತು ಸಾಮಾಜಿಕ ಸಂಬಂಧಗಳು ಒಂದಕ್ಕೊಂದು ಬೇರ್ಪಡಿಸಲಾರದಂತೆ ಹೆಣೆದುಕೊಂಡಿವೆ ಎಂಬುದನ್ನು ಅರಿಯಬಹುದು. ಇಲ್ಲಿ ಬರುವ ಧೂಳಪ್ಪನ ತಂದೆ ಸಂಗಪ್ಪನು ಆರ್ಥಿಕ ದುಸ್ಥಿತಿಯಿಂದ ಒದ್ದಾಡುವ ಚಿತ್ರವು ಸಮಕಾಲೀನ ಸಮಾಜದ ಪರಿಸ್ಥಿತಿಗೆ ಹಿಡಿದ ಕನ್ನಡಿಯೆನಿಸುತ್ತದೆ. ಕಥೆಯು ವಾಸ್ತವಿಕ ನೆಲೆಯಲ್ಲಿ ವಸ್ತುವನ್ನು ಗ್ರಹಿಸಿ ಮೌನವಾಗಿ ಅದನ್ನು ಕಟ್ಟಿಕೊಡುವುದರ ಮೂಲಕ ಅದನ್ನು ಕಲಾತ್ಮಕಗೊಳಿಸುವ ಸಹಜತೆ ಇಲ್ಲಿ ಇದ್ದು ಕಾಣುತ್ತದೆ. ಸಾಮಾಜಿಕ ಸಂಘರ್ಷದ ಜೊತೆಗೆ ವೈಯಕ್ತಿಕ ಧರ್ಮಸಂಕಟವಿಲ್ಲದೆ ಜೀವನದಲ್ಲಿ ಬಂದಂಥ ತೊಂದರೆಯಿಂದ ಧೂಳಪ್ಪನು ಯಾವ ದಡಕ್ಕೂ ಸೇರದಂತೆ ಮಧ್ಯದಲ್ಲಿಯೇ ಬಳಲುತ್ತಾನೆ. ಇಂತಹ ಒಬ್ಬ ವ್ಯಕ್ತಿಯಲ್ಲಿ ಒಡಮೂಡಿ ಬಂದ ನೋವಿನ ಅನುಭವಗಳು ಸಮಾಜದ ಅನೇಕ ವ್ಯಕ್ತಿಗಳಲ್ಲಿ ಕಾಣ ತಂದವುಗಳಾಗಿವೆ. ಹೀಗಾಗಿ ಇಂತಹ ಅನುಭವದಿಂದ ಮುಂಬರುವ ಪೀಳಿಗೆಗಳಲ್ಲಿ ಹಿರಿಯರ ಬಗ್ಗೆ ಒಂದು ಗೌರವ ಭಾವನೆ ಮೂಡಲಿ ಎಂಬ ಉದ್ದೇಶಗಳನ್ನು ಈ ಕಥೆಯು ವ್ಯಕ್ತಗೊಳಿಸುತ್ತದೆ.

"ಅಂತಿಮ ನಿರ್ಧಾರ" [2] ಎಂಬ ಕಥೆಯಲ್ಲಿ 'ವಿನಾಶಕಾಲೇ ವಿಪರಿತಬುದ್ಧಿ' ಎಂಬಂತೆ ಪಟ್ಟಣಗಳಲ್ಲಿಯೂ ಗ್ರಾಮೀಣ ಬದುಕಿನಲ್ಲಿಯೂ ಹೆಂಡ ತುಂಬಿ ತುಳುಕುತ್ತಿರುವ ಚಿತ್ರವಿದೆ. ನೀರು ಕುಡಿದಷ್ಟೇ ಸಹಜವಾಗಿ ಹೆಂಡಕ್ಕೆ ಸ್ಪಂದಿಸುತ್ತಿರುವುದನ್ನು ಇಲ್ಲಿ ತಿಳಿಸಲಾಗಿದೆ. ಇಲ್ಲಿ ಬರುವ ಸುರೇಶ ಒಬ್ಬ ಬಡಕೂಲಿಕಾರ ಬಾಲ್ಯದಲ್ಲೇ ಹೆತ್ತವರನ್ನು ಕಳೆದುಕೊಂಡ ತಬ್ಬಲಿ, ಅವನ ದುಡಿಮೆ ಮತ್ತು ಪ್ರಾಮಾಣಿಕತೆಯನ್ನು ಕಂಡು ಪದ್ಮಾಳ ಜೊತೆಗೆ ಮದುವೆ ಮಾಡುತ್ತಾರೆ. ಜೀವನದಲ್ಲಿ ಒಮ್ಮಿಂದೊಮ್ಮೆಲೆ ಅನಿರೀಕ್ಷಿತವಾಗಿ ಕೆಲವು ತಿರುವುಗಳು ಬರುತ್ತವೆ. ಇದರಿಂದ ಆತನು ಕುಡುಕನಾಗಿ ಮಾರ್ಪಡುವ ಸಂದರ್ಭವಿದೆ.

---

**ಅಡಿ ಟಿಪ್ಪಣಿ:**

೧. 'ಬಿಂಬ ಪ್ರತಿಬಿಂಬ' ೧೯೯೭ (ಪುಟ ೧೩) ಬಿ.ಎಸ್.ಖೂಬಾ

೨. 'ಬಿಂಬ ಪ್ರತಿಬಿಂಬ' ೧೯೯೭ (ಪುಟ ೫೯) ಬಿ.ಎಸ್.ಖೂಬಾ

ಕುಡುಕ ಗೆಳೆಯರೊಂದಿಗೆ ಸೇರಿ ಮಿತಿಮೀರಿ ಕುಡಿದು ಗೆಳೆಯರೊಂದಿಗೆ ಜಗಳವಾಡಿದ್ದಕ್ಕಾಗಿ ಅವರೆಲ್ಲರೂ ಸೇರಿ ಅವನ ಹೆಂಡತಿಯನ್ನು ಬಲತ್ಕಾರ ಮಾಡುವ ಮೂಲಕ ಸೇಡು ತಿರಿಸಿಕೊಳ್ಳಲು ಯತ್ನಿಸುತ್ತಾರೆ. ಅವರನ್ನು ತಡೆಯಲು ಶಿಕ್ಷಿಸಲು ಹೋಗಿ ತಾನೇ ವಿಧಿವಶನಾಗಿ ಸಾವನಪ್ಪುವ ರೀತಿ ಇಲ್ಲಿದೆ. ಹೆಣ್ಣಿಗೆ ಆಸರೆಯೇ ಗಂಡ ಅವನಿಲ್ಲದ ಅವಳ ಜೀವನ ಘೋರ. ಹೀಗಾಗಿ ಅವಳು ಜಿಗುಪ್ಸೆಗೊಂಡು ಬಾವಿಗೆ ಹಾರಿ ತನ್ನ ಪ್ರಾಣವನ್ನು ಕಳೆದುಕೊಳ್ಳುತ್ತಳೆ. ಇಲ್ಲಿ ಅನ್ಯೋನ್ಯವಾಗಿದ್ದ ಕುಟುಂಬವು ಕುಡಿತದಿಂದ ನಾಶವಾದ ದುರಂತ ಚಿತ್ರ ಕಥೆಯಾಗಿ ಮೂಡಿದೆ. ಸುರೇಶನ ಜೀವನದ ಘಟನೆಯನ್ನು ಪದ್ಮಾಳ ದುರಂತದ ದಾರುಣ ಸ್ಥಿತಿಯನ್ನು ಕಥೆಯಲ್ಲಿ ಕಣ್ಣಾರೆಕಂಡ ಬಸವರಾಜನು ಜಾಗೃತನಾಗಿ ಮುಂದೆ ಜೀವನದುದ್ದಕ್ಕೂ ಸುರಾಪಾನವನ್ನು ಮಾಡುವುದಿಲ್ಲ. ಇದು ನನ್ನ 'ಅಂತಿಮ ನಿರ್ಧಾರ' ಎಂದು ನಿರ್ಧಾರ ಮಾಡಿ ನಡೆಯುವುದು, ಅದರ ಪರಿಣಾಮ ಎನ್ನಬಹುದಾದರೂ ಮತ್ತೊಮ್ಮೆ ಬಸವರಾಜ ಆಳುಮಗ ಕುಡಿತಕ್ಕೆ ಶರಣಾಗಿ ತನ್ನ ಹೆಂಡತಿ ಮಾತ್ರವಲ್ಲದೇ ಇಡೀ ಕುಟುಂಬವನ್ನು ಸರ್ವನಾಶ ಮಾಡುವುದನ್ನು ಕಣ್ಣಾರೆ ಕಂಡು ಅಂತಿಮ ಪ್ರತಿಜ್ಞೆ ಮಾಡುವಲ್ಲಿ ಪುನಃ ಆ ಆಟ ಮುಂದುವರೆದಿರುವ ಸೂಚನೆಯಿದೆ. ಈ ಚಟಕ್ಕೆ ಬಲಿಯಾದ ವ್ಯಕ್ತಿ ಮತ್ತೆ ಮತ್ತೆ ಕುಡುಕನಾಗುವ ಪ್ರಸಂಗವನ್ನು ಅದೇ ರೀತಿಯಲ್ಲಿ ತೋರಿಸುತ್ತದೆ.

ಆದ್ದರಿಂದ ಒಮ್ಮೆ ಚಟಕ್ಕೆ ಅಂಟಿಕೊಂಡರೆ ಅದರಿಂದ ಮುಕ್ತಿ ಪಡೆಯುವುದು ಅಸಾಧ್ಯ ಎಂಬುದನ್ನಿಲ್ಲಿ ನಿರೂಪಿಸಿದ್ದಾರೆ. ಅದಕ್ಕಾಗಿ ಕವಿಯು ಕೊನೆಯಲ್ಲಿ

"ಕುಡಿತಕ್ಕೊಂದು ನೆಪವು ಬೇಕು
ಕುಡಿದು ಮತ್ತರಾಗಿ
ಆಡಬಾರದೆಲ್ಲಾ ಆಡಿ
ಮಾಡಬಾರದೆಲ್ಲ ಮಾಡಿ
ತತ್ವಜ್ಞಾನವೆಲ್ಲ ಮೂಡಿ
ಕೊನೆಗೆ ಏನು ತಿಳಿಯದಾಗಿ,
ಸ್ತಬ್ಧರಾಗಿ ಬಿಡುವರು "[೩]

ಎಂದು ಹೇಳುವ ಮಾತು ಮತ್ತೆ ಮತ್ತೆ ಪ್ರತಿಧ್ವನಿಸುತ್ತಲೇ ಇರುತ್ತದೆ. ಇಂದಿನ ಸಮಾಜದಲ್ಲಿ ನೀತಿಗಿಂತ ಅನೀತಿಗೆ, ಒಳ್ಳೆಯದಕ್ಕಿಂತ ಕೆಟ್ಟದಕ್ಕೆ, ಸತ್ಯಕ್ಕಿಂತ ಅಸತ್ಯಕ್ಕೆ, ಜನ ಹೇಗೆ ಸ್ಪಂದಿಸುತ್ತಾರೆ. ತೊಳಕ್ಕೆ ಕುರಿ ತಾನಾಗಿಯೇ ಬಲಿಯಾಗುವಂತೆ 'ತಗ್ಗಿದ್ದಲ್ಲಿ ನೀರು ಹರಿಯುವಂತೆ' ಜನರು ಅವನತಿಯತ್ತ ಸಾಗುತ್ತಾರೆ ಎಂಬುದನ್ನು ಕವಿಯು ಇಲ್ಲಿ ವಿವರಿಸುತ್ತಾರೆ.

---

**ಅಡಿಟಿಪ್ಪಣಿ**

೩ 'ಬಿಂಬ ಪ್ರತಿಬಿಂಬ' ೧೯೯೭ ಪುಟ ೬೪

"ವಿಚಿತ್ರ ಸತ್ಯ''[೪] ಮನಶಾಸ್ತ್ರದ ಹಿನ್ನೆಲೆಯಲ್ಲಿ ದೇವರನ್ನು ಕಾಣುವ ಹಂಬಲವುಳ್ಳದ್ದು ಅಪಘಾತದಲ್ಲಿ ಬದುಕಿ ಉಳಿಯುವುದು ಮುಖ್ಯವಲ್ಲ, ಉಳಿಯಬಹುದು ಆದರೆ ದೇವರನ್ನು ಕಾಣಲು ಹೊರಟಿರುವವನಿಗೆ ಎಂಥ ಅಪಘಾತಗಳು ಬಂದರೂ ಅವು ಏನು ಮಾಡಲಾರದೆಂಬ ಮಾನಸಿಕ ದೃತಿ ಇಲ್ಲಿ ಕೆಲಸ ಮಾಡುತ್ತದೆ. ಇಲ್ಲಿ ಕೇವಲ ಒಂದು ಘಟನೆಯ ವರದಿಯಾಗದೇ ಮನದ ಬಿತ್ತಿಯ ಮೇಲೆ ಬಿಡಿಸಿರುವ ಅನೇಕ ಕಥಾನಕದ ಚಿತ್ರಗಳು ಕಾಣಸಿಗುತ್ತವೆ.

ಇಲ್ಲಿ ಬರುವ ಸಂತೋಷನಿಗೆ ಮೊದಲಿನಿಂದಲೇ ದೇವರ ಬಗ್ಗೆ ಒಲುವು ಭಗವದ್ಗೀತಾ ಓದುವುದರ ಪ್ರಭಾವ ಮುಂತಾದ ಆಧ್ಯಾತ್ಮಿಕ ನಂಬಿಕೆಗಳು ಇಲ್ಲಿ ಪ್ರಬಲವಾಗಿವೆ. ಇದು ದೇವರನ್ನು ಕಾಣುವ ಹಂಬಲಕ್ಕೆ ಕಾರಣವಾಗುತ್ತದೆ. ಅವನು ಆ ನಿರ್ಧಾರ ತೆಗೆದುಕೊಳ್ಳುತ್ತಾನೆ. ಇದರಿಂದಲೇ ಆತನು ಮಾನಸಿಕ ದ್ವಂದ್ವಕ್ಕೆ ಸಿಲುಕಿ ಬುದ್ಧಿ ಭ್ರಮೆಗೊಳಗಾಗುತ್ತಾನೆ. ಇದರಿಂದ ಸುಮಾರು ಮೂರು ನಾಲ್ಕು ದಿನಗಳವರೆಗೆ ನಿದ್ರೆ ಮಾಡುವುದಿಲ್ಲ. ಜೊತೆಗೆ ಆತನ ಬದುಕಿನಲ್ಲಿ ಉಂಟಾದ ಮೊದಲು ರಾತ್ರಿಯಲ್ಲಿ ಮನೆಯಿಂದ ಹೊರಗೆ ಹೋಗುವುದು, ನಾಯಿಗಳಿಗೆ ಹೆದರಿ ಹಿಂದಿರುಗಿ ಬರುವುದು ಮತ್ತೊಮ್ಮೆ ಮಾಳಗೆ ಮೇಲಿಂದ ಬಿದ್ದರೂ ಯಾವುದೇ ಗಾಯವಾಗದಿರುವುದರಿಂದ ಇದನ್ನೇ 'ದೇವರ ದರ್ಶನ' 'ದೈವಿ ಚಮತ್ಕಾರ' ಎಂದು ತನ್ನ ಅಂತರಾತ್ಮದಲ್ಲಿ ತಿಳಿದುಕೊಳ್ಳುವುದನ್ನು ಕತೆ ವಿವರಿಸುತ್ತದೆ. ಇದು ಜೀವನದಲ್ಲಿಯ ಆತನ ನಂಬುಗೆಯನ್ನು ತಿಳಿಸುವ ಉದ್ದೇಶದ ಕತೆಯಾಗಿದ್ದು, ಅಂಥವರ ಜೀವನಕ್ಕೆ ಕನ್ನಡಿ ಹಿಡಿಯುತ್ತದೆ.

'ಸಾವಿನಿಂದ ಬಿಡುಗಡೆ''[೫] ಕಥೆಯಲ್ಲಿ ಬರುವ ವಿವೇಕನು ಜೀವನದಲ್ಲಿ ಜಿಗುಪ್ಸೆಗೊಂಡು ಸಾವಿಗೆ ಮೊರಹೋಗುವುದಿಲ್ಲ ಮುಖ್ಯವಾಗಿ ಸಾವು ಹೇಗೆ ಇದೆ? ಎಂಬುದನ್ನು ತಿಳಿದುಕೊಳ್ಳಲು ಕುತೂಹಲಕಾರಿಯಾಗಿ ಹೇಗೆ ಮುಂದುವರೆಯುತ್ತಾನ? ಎಂಬುದನ್ನು ಈ ಸಾವಿನಿಂದ ಬಿಡುಗಡೆ ಕಥೆಯಲ್ಲಿ ತಿಳಿಸಲಾಗಿದೆ. ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ಆತ್ಮಕ್ಕೆ ಸಾವಿಲ್ಲ ಎಂಬುದೇ ಇಲ್ಲಿಯ ಮುಖ್ಯ ಚಿಂತನೆ. ಕೌಟುಂಬಿಕ ತೊಂದರೆ, ಸಮಾಜದಲ್ಲಿಯ ಅನ್ಯಾಯ, ವೈಚಾರಿಕತೆ, ಇವೆಲ್ಲವುಗಳಿಂದ ಬೆಸತ್ತು, ಬದುಕು ಮುಖ್ಯವಲ್ಲ ಎಂದೆನಿಸಿ ವಿವೇಕನಿಗೆ ಸಾಯಬೇಕೆನಿಸುತ್ತದೆ. ಸಾಯಬೇಕಾದರೆ ಹೇಗೆ ಸಾಯಬೇಕು? ಎಂದು ಬೆಸತ್ತು ಕೊನೆಗೆ ಆತ್ಮಕ್ಕೆ ಸಾವು ಇಲ್ಲ ಎಂದು ಆಲೋಚಿಸಿ ಗಟ್ಟಿ ನಿರ್ಧಾರದ ಹಿನ್ನೆಲೆಯಲ್ಲಿ ವಿವೇಕನು ಬದುಕುಳಿಯುವುದರೊಂದಿಗೆ ಕಥೆಯು ಅಂತ್ಯಗೊಳ್ಳುತ್ತಿರುವುದು ಸಾವಿನ ರಹಸ್ಯ ತಿಳಿಯುವ ಹಿನ್ನೆಲೆಯಲ್ಲಿ ಪ್ರಮುಖವೆನಿಸುತ್ತದೆ.

---

**ಅಡಿಟಿಪ್ಪಣಿ:**

೪ 'ಬಿಂಬ ಪ್ರತಿಬಿಂಬ' ೧೯೯೭ ಪುಟ ೭೩

೫ – ಆದೇ – ಪುಟ ೧೫

ಇಲ್ಲಿ ಎಲ್ಲ ಸುಳ್ಳು ಸಾವು ಸತ್ಯ ಎಂಬ ಸಂಗತಿಯನ್ನು ಮನಗಂಡಿದ ವಿವೇಕನು ತಂದೆಯು ಮರಣ ಹೊಂದುವಾಗ ತಂದೆಯ ಬಳಿಯಲ್ಲಿಯೇ ಕುಳಿತಿದ್ದರೂ ಆತನಿಗೆ ಮರಣದ ದರ್ಶನವಾಗಲಿಲ್ಲ. ಜೀವನವು ಅವನ ಅಧೀನದಲ್ಲಿದ್ದಂತೆ, ಮರಣವು ಅವನ ಅಧೀನದಲ್ಲಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದೆನಿಸುತ್ತದೆ. ವಿವೇಕನು ಎಲ್ಲ ರೀತಿಯಿಂದ ಸುಖ ಜೀವಿಯಾಗಿದ್ದಾನೆ ನಿಜ ಸ್ವಾಭಿಮಾನ ದೇಶಾಭಿಮಾನ, ಆತ್ಮಾಭಿಮಾನ, ಪ್ರಾಮಾಣಿಕತೆ, ಪರೋಪಕಾರ, ಸಹಾನುಭೂತಿಗಳೆಲ್ಲ ಮಾಯವಾಗುತ್ತಿರುವುದನ್ನು ಕಂಡು ಏಕೆ ಬದುಕೀರಬೇಕು? ಎಂದು ಪ್ರಶ್ನಿಸುವ ಆತನ ಮನೋಭಾವ ಇಲ್ಲಿ ಓದುಗರನ್ನು ವಿಚಾರಶೀಲರನ್ನಾಗಿ ಮಾಡುತ್ತದೆ. ಸಾರ್ಥಕ ಬದುಕನ್ನು ಎತ್ತಿ ತೋರಿಸುತ್ತದೆ.

'ವಿಚಿತ್ರ ಸತ್ಯ' ಕಥೆಯಲ್ಲಿ ದೈವಿ ಸಾಕ್ಷಾತ್ಕಾರದ ಹಂಬಲ ಮೂಡಿದರೆ 'ಸಾವಿನಿಂದ ಬಿಡುಗಡೆ' ಕಥೆಯು ಸಾವನ್ನು ಕುರಿತು ಚಿಂತೆಗೆ ಮಾಡುವಂತಹುದ್ದಾಗಿದೆ. ಈ ಕಥೆಯ ರಚನೆಯಲ್ಲಿ ಹಂದರಕ್ಕಿಂತಲೂ ಚಿಂತನೆ ಮುಖ್ಯವಾಗಿದ್ದು ಆ ದೃಷ್ಟಿಯಲ್ಲಿ ಗಮನ ಸೆಳೆಯುತ್ತದೆ. ವಿವೇಕನ ಪಾತ್ರವು ಸಾವನ್ನು ಕಾಣುವ ಉತ್ಕಟತೆಯಲ್ಲಿ ತೃಪ್ತಿಪಡೆಯುವುದರಿಂದ ತುಂಬ ಪರಿಣಾಮಕಾರಿಯೆನಿಸುತ್ತದೆ.

"ಒಟ್ಟಾರೆ ಸಾವಿನಿಂದ ಬಿಡುಗಡೆ" ಮತ್ತು "ವಿಚಿತ್ರ ಸತ್ಯ" ಎಂಬ ಎರಡೂ ಕಥೆಗಳೂ ತಂತ್ರದ ದೃಷ್ಟಿಯಿಂದ ಹೊಸತನವನ್ನು ಕಾಣಿಸುವಲ್ಲಿ ನೂರಕ್ಕೆ ತೊಂಭತ್ತು ಅಂಕಗಳಿಸುತ್ತವೆ"[೬] ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿರುವುದು ಸರಿಯೆನಿಸುತ್ತದೆ.

"ಜಿಮ್ಮನ ಕನಸು"[೭] ಎಂಬ ಕಥೆಯು ಲೇಖಕರ ಬದುಕನ್ನೇ ಪ್ರತಿಬಿಂಬಿಸುವ ಇದೊಂದು ಕಾಲ್ಪನಿಕ ಕಥೆಯಾಗಿದ್ದು ಇದು ಒಬ್ಬ ಸಾಮಾನ್ಯನು ತನ್ನ ಹಿರಿಮೆಯನ್ನು ಕುರಿತು ಅಲಕ್ಷಿಸಿದ ಹಿನ್ನೆಲೆಯಲ್ಲಿ ಮಹಾಚೇತನವಾಗಿ ಬೆಳಕು ಕಂಡ ಎಲೆಯ ಮರೆಯ ಹೂವಿನಂತಿರುವ ಜೀವನ ಗಾಥೆಯನ್ನು ಸಮರ್ಥವಾಗಿ ಪ್ರತಿನಿಧಿಸುವ ಉತ್ತಮ ಕಥೆಯಾಗಿದೆ. ಕಥೆಯು ಸಂಭಾಷಣೆಯ ರೂಪದಲ್ಲಿ ಪ್ರಾರಂಭವಾಗಿ ತನ್ನ ಒಳಪದರನ್ನು ಬಿಚ್ಚಿಕೊಳ್ಳುತ್ತದೆ. 'ಜಿಮ್ಮನ ಕನಸು' ಇದು ಖೂಬಾರ ಐದನೆಯ ಸೃಜನಾತ್ಮಕ ಕಥೆ.

ಬಂಡೆಪ್ಪ ಖೂಬಾ ಅವರು ಇತ್ತೀಚೆಗೆ ಬರೆದಿರುವ ನನ್ನ ತಂಗಿ ಮತ್ತು ನನ್ನ ತಮ್ಮ ಎಂಬ ಎರಡು ಕಥೆಗಳು ಹಿಂದಿ ಸಾಹಿತ್ಯದಲ್ಲಿ ಮಹಾದೇವಿ ವರ್ಮಾ ಅವರು ಬರೆದಿರುವ ಮಾದರಿಯಲ್ಲಿದ್ದು, ರೇಖಾಚಿತ್ರದ ರೂಪದಲ್ಲಿವೆ. ಈ ಎರಡು ರೇಖಾಚಿತ್ರಗಳು ವಚನಕ್ರಾಂತಿಯಲ್ಲಿ ಪ್ರಕಟವಾಗಿದ್ದು ಉತ್ತಮವಾಗಿಧೆ.

---

**ಅಡಿ ಟಿಪ್ಪಣಿ:**

೬ 'ಬಿಂಬ ಪ್ರತಿಬಿಂಬ'-೧೯೯೭ ಬೆನ್ನುಡಿ ಡಾ.ಎಸ್.ಎಸ್. ಹಿರೇಮಠ

೭ ಜಿಮ್ಮನ ಕನಸು ವಚನ ಕ್ರಾಂತಿ ದಿನಪತ್ರಿಕೆ

ನನ್ನ ತಮ್ಮ ''[೮] ರೇಖಾಚಿತ್ರವು ದುರಂತದಲ್ಲಿ ಕೊನೆಗೊಳ್ಳುತ್ತದೆ. ರಾಜಶೇಖರನ ಜೀವನದ ತಾಪತ್ರಯಗಳನ್ನು ಹಾಗೂ ಬಾಧೆಯನ್ನು ಸಹಿಸಿಕೊಳ್ಳದೇ ಮಾನಸಿಕ ರೋಗಕ್ಕೆ ಬಲಿಯಾಗಿ, ಅಸುನೀಗುವ ಚಿತ್ರಣವು ಬಲು ಮಾರ್ಮಿಕವಾಗಿ ಚಿತ್ರಣಗೊಂಡಿದೆ. ಮೂವತ್ತೇಂಟನೆಯ ವಯಸ್ಸಿನಲ್ಲಿ ಇಬ್ಬರು ಪತ್ನಿಯರೊಂದಿಗೆ ಸಂಸಾರ ಸಾಗಿಸುತ್ತಿರುವ ರಾಜಶೇಖರನು ತನ್ನ ಜೀವನವನ್ನು ಅಂತ್ಯಗೊಳಿಸುವುದರೊಂದಿಗೆ ಈ ರೇಖಾಚಿತ್ರವು ದುಃಖಾಂತ್ಯಗೊಳ್ಳುತ್ತದೆ.

ನನ್ನ ತಂಗಿ''[೯] ರೇಖಾಚಿತ್ರವು ಈರಮ್ಮಳ ದಾಂಪತ್ಯ ಜೀವನದಲ್ಲಿ ಆಕಸ್ಮಿಕವಾಗಿ ಗಂಡನೊಂದಿಗಿರುವ ಸಂಬಂಧ ಕಡಿದು ತಂದೆಯ ಮನೆಯಲ್ಲಿಯೇ ವಾಸಿಸುವ ಪ್ರಸಂಗ ಬರುತ್ತದೆ. ಅದಕ್ಕೆ ಭಯಪಡದೇ ಗಂಡಸರಿಗೂ ಮೀರಿಸುವಂತಹ ಧೈರ್ಯ, ಸಾಹಸವನ್ನು, ಅವಳು ತೋರುತ್ತಾಳೆ. ಅವಳು ತಂದೆಯ ಮರಣಾನಂತರ ಅಣ್ಣ ತಮ್ಮಂದಿರೊಂದಿಗೆ ತೌರು ಮನೆಯಲ್ಲಿಯೇ ಜೀವನ ಸಾಗಿಸುತ್ತ ಒಂದು ಸಣ್ಣ ಕಿರಾಣಿ ಅಂಗಡಿಯಿಂದ ಜೀವನ ಸಾಗಿಸುವುದಲ್ಲದೇ ತನ್ನ ಸ್ವಂತ ಬಲದಿಂದ ಒಂದು ಹೊಲ ಖರೀದಿಸುವುದಲ್ಲದೇ, ಪ್ಲಾಟನ್ನು ಖರೀದಿಸಿ ಮನೆ ಕಟ್ಟಿಸುವುದು ಮತ್ತು ನಿರಾಶನಾಗಿರುವ ಅಣ್ಣನ ಜೀವನಕ್ಕೆ ಸ್ಫೂರ್ತಿನೆಲೆಯಾಗಿ ನಿಲ್ಲುವುದು ಇವೆಲ್ಲ ಈ ರೇಖಾಚಿತ್ರದಲ್ಲಿ ತುಂಬ ಮಾರ್ಮಿಕವಾಗಿ ಚಿತ್ರಣಗೊಂಡಿವೆ. ಓದುಗರ ಮನಸ್ಸಿನ ಮೇಲೆ ಅಚ್ಚಳಿಯದ ಪ್ರಭಾವ ಬೀರುವಲ್ಲಿ ಸಮರ್ಥವಾಗುವ ಈ ಕಥೆಯು ಇಂಥ ಹೆಣ್ಣು ಮಕ್ಕಳ ಜೀವನಕ್ಕೆ ಒಂದು ಮಾದರಿಯಾಗಿ ನಿಂತು ಅವರಿಗೆ ಜೀವನದಲ್ಲಿ ಭರವಶೆ ಮೂಡಿಸುತ್ತದೆ.

ಒಟ್ಟಿನಲ್ಲಿ ಇಂದಿನ ಬದುಕಿಗೆ ಪ್ರಸ್ತುತವಾಗುವ ನಿಟ್ಟಿನಲ್ಲಿ ಮಹತ್ವದ ಕಥೆಗಳನ್ನು ಅನುವಾದ ಮಾಡಿರುವ ಖೂಬಾ ಅವರು ಒಬ್ಬ ಉತ್ತಮ ಕಥೆಗಾರರಾಗಿ ಬೆಳೆಯುತ್ತಿರುವುದನ್ನು ನಾವಿಲ್ಲಿ ಗುರುತಿಸಬಹುದಾಗಿದೆ.

---

**ಅಡಿ ಟಿಪ್ಪಣಿ:**

೮ ರೇಖಾಚಿತ್ರ — ವಚನ ಕ್ರಾಂತಿ ದಿನಪತ್ರಿಕೆ

೯ – ಅದೇ – — ವಚನ ಕ್ರಾಂತಿ ದಿನಪತ್ರಿಕೆ

ಅಧ್ಯಾಯ - ಆರು

## ಉಪಸಂಹಾರ

ಬೀದರ ಜಿಲ್ಲೆಯ ಆಧುನಿಕ ಕವಿಗಳಲ್ಲಿ ಪ್ರಮುಖರಾಗಿರುವ ಶ್ರೀ ಬಂಡೆಪ್ಪ ಖೂಬಾರವರು ಸೃಜನಶೀಲ ಬರಹಗಾರರು. ಈ ಭಾಗದ ಕನ್ನಡ ಸಾಹಿತ್ಯದಲ್ಲಿ ಖಂಡಕಾವ್ಯ, ಪ್ರಾಕ್ಕಥನ ಹಾಗೂ ಪ್ರಬಂಧ ಕಾವ್ಯಗಳ ಯುಗವೇ ಇಲ್ಲವೇನು ಎನ್ನುವಂತಹ ಸ್ಥಿತಿಯಲ್ಲಿ ಆಧುನಿಕ ಖಂಡಕಾವ್ಯಗಳ ಸಾಹಿತ್ಯವೇ ಇಲ್ಲವೇನು ಎನ್ನುವಷ್ಟರಲ್ಲಿ ಇವರು ಈ ಕೃತಿಗಳ ಆ ಕೊರಗನ್ನು ನೀಗಿಸಿದರು ಎಂದು ಹೇಳಬಹುದು. ಕನ್ನಡದಲ್ಲಿ ಡಿ.ವಿ.ಜಿ. ಸಿದ್ದಯ್ಯಾ ಪುರಾಣಿಕ, ಮಹಾದೇವ ಬಣಕಾರ ಮೊದಲಾದವರ ಕಾವ್ಯ ಶೈಲಿಗೆ ಹೊಂದಿಕೊಂಡಿರುವ ಇವರ ಖಂಡಕಾವ್ಯ "ಯುಗವಾಣಿ" ಹಾಗು "ಶತಕಾಂತ್ಯದ ವಚನ ಶತಕ" ಓದುಗರಿಗೆ ಹೊಸ ಅನುಭವವನ್ನು ಕೊಡುತ್ತದೆ. ಖೂಬಾರವರು ಇಂದಿನ ಬದುಕನ್ನು ಆದರ್ಶದ ನೆಲೆಯಲ್ಲಿ ಕಾಣಲು ಪ್ರಯತ್ನಿಸಿದ್ದು, ಆ ಬದುಕಿನಲ್ಲಾದ ಹಲವು ತೆರವಾದ ಬದಲಾವಣೆಗಳನ್ನು ಗುರುತಿಸಿದ್ದಾರೆ. ಜೀವನವನ್ನು ಹಲವು ನೆಲೆಗಳಿಂದ ಗಮನಿಸುವ ಖೂಬಾ ರವರ ಸಾಹಿತ್ಯ ಹಲವು ಚಿಂತನೆಗಳ ಮೊತ್ತವಾಗಿದೆ. ಅವುಗಳನ್ನು ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಆಧ್ಯಾತ್ಮಿಕ ಹಾಗೂ ನಾಡು-ನುಡಿ ಚಿಂತನೆಗಳ ಹಿನ್ನೆಲೆಯಲ್ಲಿ ಕಾಣಬಹುದು. ಶ್ರೇಷ್ಠ ಕವಿಯಾಗಿ, ಉತ್ತಮ ಅನುವಾದಕರಾಗಿ, ಸೃಜನಶೀಲ ಕಥೆಗಾರರಾಗಿ ಹಾಗೂ ಜೀವನ ಚರಿತ್ರಕಾರರಾಗಿ ಕಾಣಿಸುವ ಇವರ ಸಾಹಿತ್ಯ ಹಲವು ದೃಷ್ಟಿಯಿಂದ ಶ್ರೇಷ್ಠವಾಗಿದೆ ಇಂದಿನ ಕನ್ನಡದ ಶ್ರೇಷ್ಠ ಲೇಖಕರ ಸಾಲಿನಲ್ಲಿ ನಿಲ್ಲಬಲ್ಲ ಪ್ರತಿಭೆಯುಳ್ಳ ಈ ವ್ಯಕ್ತಿಯು ಈ ಭಾಗದ ವಿಮರ್ಶಕರ ಕೊರತೆಯಿಂದಾಗಿ 'ಎಲೆಮರೆಯ ಕಾಯಿಯಂತೆ' ಉಳಿದು ಹೋಗಿದ್ದಾರೆ. ಅವರನ್ನು ಕುರಿತು ಅಧ್ಯಯನ ಮಾಡುವುದೊಂದಿಗೆ ಅವರ ಸಾಹಿತ್ಯದ ಶ್ರೇಷ್ಠತೆಯನ್ನು ವಿಶ್ಲೇಷಿಸಿ ನೋಡುವುದರೊಂದಿಗೆ ಹಲವು ದೃಷ್ಟಿಕೋನಗಳಿಂದ ಅವುಗಳನಿಲ್ಲಿ ಗುರುತಿಸಲಾಗಿದೆ.

ಡಿ.ವಿ. ಗುಂಡಪ್ಪ ನವರ 'ಮಂಕು ತಿಮ್ಮನ ಕಗ್ಗ' ದಿಂದ ಪ್ರಭಾತರಾಗಿರುವ ಈ ಕವಿಯು 'ಪೆದ್ದ ಜಿಮ್ಮ' ಅಂಕಿತವಾಗಿಟ್ಟುಕೊಂಡು "ಅಳು ನೆಗೆಯ ಸುಳಿಯಲ್ಲಿ" ಎಂಬ ಕೃತಿಯನ್ನು ರಚಿಸಿದ್ದಾರೆ. ಶೈಲಿಯ ದೃಷ್ಟಿಯಿಂದ ಹಾಗೂ ಪದ್ಯದ ರಚನೆಯ ದೃಷ್ಟಿಯಿಂದ ಡಿ.ವಿ.ಜಿ. ಯವರಿಗೆ ತುಂಬಾ ಋಣಿಯಾಗಿರುವ ಖೂಬಾರವರದು ಅನುಕರಣೀಯ ಶೈಲಿ. ವಸ್ತು , ಭಾಷೆ, ಶೈಲಿಯ ದೃಷ್ಟಿಯಿಂದ ಹಲವು ಸಂದರ್ಭಗಳಲ್ಲಿ ಡಿ.ವಿ.ಜಿ ಯವರ ಕಗ್ಗವನ್ನೇ ಹೋಲುವ ಇವರ ಇಲ್ಲಿಯ ಪದ್ಯಗಳು ತನ್ನದೇ ಆದ ದೃಷ್ಟಿಯಿಂದ ಅವುಗಳಿಗಿಂತ ಭಿನ್ನವಾಗಿ ನಿಲ್ಲುತ್ತವೆ. ಅದರಲ್ಲೂ ಬೀದರ ಭಾಷಾ ದೃಷ್ಟಿ ಈ ಭಿನ್ನತೆಗೆ ಕಾರಣವೆನ್ನಬಹುದು. ಅಂತೆಯೇ 'ಮರುಳು ಸಿದ್ಧರ' ಕವಿತೆಗಳಿಗೂ ಇವುಗಳಿಗೆ ಹೋಲಿಸಿ ನೋಡಬಹುದು.

ಆಧುನಿಕ ವಚನಗಳ ಮಾಲಿಕೆಯಲ್ಲಿ ಇವರ "ಶತಕಾಂತ್ಯದ ವಚನ" ಮತ್ತು "ಯುಗ ವಾಣಿ" ಮಹತ್ವದ ಕೃತಿಗಳಾಗುತ್ತವೆ. ಈ ಎರಡು ಕೃತಿಗಳು ಒಂದರ್ಥದಲ್ಲಿ ಕಾಲದ ಬದಲಾವಣೆಯ ಸೂಚನೆಗಳಾಗಿದ್ದು ಅವುಗಳು ಅಂದೇದಿನ ವಾಸ್ತವಿಕ ಬದುಕನ್ನು ಕಟ್ಟಿಕೊಡುತ್ತವೆ. ಹನ್ನೆರಡನೇ ಶತಮಾನದ ವಚನಗಳ ಮಾದರಿಯಲ್ಲಿರುವ ಈ ರಚನೆಗಳಿಗೆ ಸಿದ್ದಯ್ಯಾ ಪುರಾಣಿಕರ ವಚನಗಳು ಹಾಗೂ ಮಹಾದೇವ ಬಣಕಾರರ ವಚನಗಳು ಪ್ರಮುಖ ಪ್ರೇರಣೆಗಳಾಗಿದ್ದು ಖೂಬಾ ರವರ ವಚನಗಳು ಇಂದಿನ ವಾಸ್ತವಿಕ ಬದುಕಿನ ನಿಜ ಚಿತ್ರಗಳಂತಿವೆ. ಜನ ಸಾಮಾನ್ಯರ ಹಲವು ಸಮಸ್ಯೆಗಳಾದ ಬಡತನ, ಶೋಷಣೆ, ಶಿಕ್ಷಣ, ಸಾಹಿತ್ಯ, ಸಮಾಜ, ಜಾತಿ ಪದ್ಧತಿ, ನಾಡು–ನುಡಿ ಮುಂತಾದ ವಿಷಯಗಳನ್ನು ಚರ್ಚೆಗೆ ಒಳಪಡಿಸಿಕೊಂಡು ಆತ್ಮನಿವೇದನೆಯ ರೂಪದಲ್ಲಿ ನಿರೂಪಣೆ ಮಾಡುತ್ತವೆ.

ಶ್ರೇಷ್ಠ ಅನುವಾದಕರಾಗಿ ಎದ್ದು ಕಾಣುವ ಖೂಬಾರವರದು ಸೃಜನಶೀಲ ಅನುವಾದ. ಹಿಂದೀ ಭಾಷೆಯಲ್ಲಿಯ ಶ್ರೇಷ್ಠ ಕಥೆಗಳನ್ನು ಕನ್ನಡಕ್ಕೆ ಅನುವಾದಿಸಿ ಕೊಟ್ಟಿದ್ದು ಇವರ ಕೊಡುಗೆ ಎನ್ನಬಹುದು. ಆ ಮೂಲಕ ಉತ್ತಮ ಅನುವಾದಕರಲ್ಲಿರಬೇಕಾದ ಅನೇಕ ಗುಣಗಳನ್ನು ಇವರು ತಮ್ಮ ಕೃತಿಯಲ್ಲಿ ತೋರ್ಪಡಿಸಿದ್ದು, ಈ ಭಾಗದ ಯಾವುದೇ ಶ್ರೇಷ್ಠ ಅನುವಾದಕರೊಂದಿಗೆ ಅವರನ್ನು ಹೊಲಿಸಿ ನೋಡಬಹುದಾಗಿದೆ. ಅಂತೆಯೇ ಅವರು ಜೀವನ ಚರಿತ್ರೆಕಾರರಾಗಿಯೂ ಗಮನ ಸೆಳೆದಿದ್ದಾರೆ. ಅವರ ರಚನೆಗಳು ಸರಳವಾಗಿ ಓದಿಸಿಕೊಂಡು ಹೋಗುವ ಗುಣಗಳು ಹೊಂದಿವೆ.

ಒಟ್ಟಿನಲ್ಲಿ ಈ ಅಧ್ಯಯನದಿಂದ ಗುರುತಿಸುವುದೇನೆಂದರೆ ಬಂಡೆಪ್ಪ ಖೂಬಾರವರು ಸಮಾಜ ಚಿಂತಕ, ಶ್ರೇಷ್ಠ ಸಾಹಿತಿ, ಉತ್ತಮ ಕಥೆಗಾರ, ಅನುವಾದಕ, ಜೀವನ ಚರಿತ್ರಗಾರ, ಎಲ್ಲಕ್ಕಿಂತ ಮಿಗಿಲಾಗಿ ಆಧ್ಯಾತ್ಮಕ ಜೀವಿ ಎಂದು ಹೇಳಬಹುದು.



**ಶ್ರೀ ಬಂಡೆಪ್ಪ ಖೂಬಾ**

ಜನನ: ೦೮–೦೭–೧೯೩೮

# ವ್ಯಕ್ತಿ ಪರಿಚಯ

| | | |
|---|---|---|
| ಹೆಸರು | : | **ಬಂಡೆಪ್ಪ ಖೂಬಾ** |
| ತಂದೆ | : | **ಶರಣಪ್ಪಾ ಖೂಬಾ** |
| ತಾಯಿ | : | ರತ್ನಮ್ಮ |
| ಜನ್ಮ ದಿನಾಂಕ | : | ೦೮-೦೭-೧೯೩೮ |
| ಜನ್ಮ ಸ್ಥಳ | : | ರಾಜೋಳಾ ತಾಃ ಬಸವಕಲ್ಯಾಣ ಜಿಃ ಬೀದರ. |
| ವಾಸ ಸ್ಥಳ | : | ಗಡವಂತಿ ತಾಃ ಹುಮನಾಬಾದ ಜಿಃ ಬೀದರ. |
| ಸಾಹಿತ್ಯದಲ್ಲಿ ಬಳಕೆಯಾದ ಹೆಸರು | : | ಬಿ.ಎಸ್.ಖೂಬಾ |
| ಕಾವ್ಯ ನಾಮ | : | "ಸರಸ್ವತಿತನಯಜಿಮ್ಮ" |
| ವಿದ್ಯಾರ್ಹತೆ | : | ಎಂ.ಎ. (ಕನ್ನಡ), ಎಂ.ಎ. (ಹಿಂದಿ), ಬಿ.ಇಡಿ. ಸಾಹಿತ್ಯರತ್ನ, |
| ವೃತ್ತಿ | : | ೧೫-೦೩-೧೯೫೯ ರಿಂದ ೩೧-೦೭-೧೯೯೬ ರವರೆಗೆ ಶಿಕ್ಷಣ ಇಲಾಖೆಯಲ್ಲಿ ಪ್ರಾಥಮಿಕ ಶಿಕ್ಷಕ ಹಾಗೂ ಪ್ರೌಢ ಶಾಲಾ ಶಿಕ್ಷಕನೆಂದು ಸೇವೆ ಸಲ್ಲಿಸಿ ೧೯೯೬ ರಲ್ಲಿ ಸೇವೆಯಿಂದ ನಿವೃತ್ತಿ. |
| ಸದ್ಯ | : | ನಿವೃತ್ತ ಶಿಕ್ಷಕನಾಗಿದ್ದು, ಸಾಹಿತ್ಯ ಸೇವೆ. |

**ಪ್ರಕಟಿತ ಕೃತಿಗಳುಃ**

೧. ಅಳುನಗೆಯ ಸುಳಿಯಲ್ಲಿ ಪೆದ್ದಜಿಮ್ಮ (ಖಂಡ ಕಾವ್ಯ) ೧೯೯೫

೨. ಐವತ್ತೆಂಟರಲ್ಲಿ ಅನುತ್ತರನ ಪೌರುಷ (ಕವನ ಸಂಕಲನ) ೧೯೯೫

೩. ಪುರಸ್ಕಾರ (ಹಿಂದೀ ಭಾಷೆಯಿಂದ ಅನುವಾದಿಸಿದ ಕಥಾ ಸಂಕಲನ) ೧೯೯೬

೪. ಬಿಂಬ ಪ್ರತಿಬಿಂಬ (ಕಥಾಸಂಕಲನ) ೧೯೯೭

೫. ಯುಗವಾಣಿ (ಪ್ರಬಂಧ ಕಾವ್ಯ) ೧೯೯೮

೬. ಶತಕಾಂತ್ಯದ ವಚನ ಶತಕ (ಆಧುನಿಕ ವಚನಗಳು) ೨೧೦೧

೭. ಧರಿನಾಡಿನ ಗಂಡುಗಲಿ ರಾಮ (ಜೀವನ ಚರಿತ್ರೆ) ೨೦೦೨

೮. ವಿಶ್ವವಿಖ್ಯಾತ ಬಿದ್ರಿ ಕಲಾ (ಹಿಂದೀ) ೨೦೦೪

**ಅಪ್ರಕಟಿತ ಕೃತಿಗಳು:**

೧. ವೀರಶೈವ ವಚನ ಸುಧಾ (೧೨ನೇ ಶತಮಾನದ ೯೦ ವಚನಕಾರರ ಮತ್ತು ೨೧ ವಚನಕಾರ್ತಿಯರ ವಚನಗಳಿಂದ ಆಯ್ಕೆಮಾಡಿದ ೫೪೧ ವಚನಗಳ ಹಿಂದಿ ಅನುವಾದ)

೨. ಡಾ।। ಎಸ್.ಎಂ. ಹಿರೇಮಠರ "ಕನ್ನಡ ಸಾಹಿತ್ಯದಲ್ಲಿ ಜ್ಞಾನಪೀಠ ಪ್ರಶಸ್ತಿ ವಿಜೇತರು" ಎಂಬ ಕೃತಿಯ ಹಿಂದಿ ಅನುವಾದ

೩. ಸುಮಾರು ೧೫೦ ಕವನಗಳು

೪. ಕಥಾ ಭಾರತಿ (ಭಾರತದ ಹತ್ತೊಂಭತ್ತು ಭಾಷೆಗಳ ಉತ್ತಮ ಕಥೆಗಳನ್ನು ಹಿಂದಿ ಭಾಷೆಯ ಮುಖಾಂತರ ಕನ್ನಡಕ್ಕೆ ಅನುವಾದ) ಈ ಕಥೆಗಳಲ್ಲಿ ಐದು ಕತೆಗಳು ತರಂಗ ವಾರ ಪತ್ರಿಕೆಯಲ್ಲಿ ಎರಡು ಕಥೆಗಳು ಸಂಯುಕ್ತ ಕರ್ನಾಟಕ ದಿನಪತ್ರಿಕೆಯ ಸಾಪ್ತಾಹಿಕ ಸೌರಭದಲ್ಲಿ, ಒಂದು ಕತೆಯು ಕರ್ನಾಟಕ ಸಾಹಿತ್ಯ ಅಕಾಡೆಮಿಯ ದ್ವಿಮಾಸಿಕ "ಅನಿಕೇತನ" ದಲ್ಲಿ ಮೂರು ಕತೆಗಳು "ಕನ್ನಡ ಮಲ್ಲ" ದಿನಪತ್ರಿಕೆಯಲ್ಲಿ ಮತ್ತು ಏಳು ಕಥೆಗಳು "ವಚನಕ್ರಾಂತಿ" ದಿನಪತ್ರಿಕೆಯಲ್ಲಿ ಪ್ರಕಟವಾಗಿದೆ.

೫. ಕನ್ನಡ ಹಿಂದಿ ಕಾವ್ಯಧಾರೆ (ಆಧುನಿಕ ಕನ್ನಡ ಮತ್ತು ಹಿಂದಿ ಕಾವ್ಯಗಳ ತೌಲನಿಕ ಅಧ್ಯಯನ)

೬. ಹಿಂದಿಯಿಂದ ಅನುವಾದಿಸಿದ ಕವನಗಳು – ಬಿಡಿ ಲೇಖನಗಳು

**ಪ್ರಶಸ್ತಿ ಸನ್ಮಾನಗಳು:**

೧. ೧೯೯೪ ರಲ್ಲಿ ಬೀದರ ಜಿಲ್ಲೆಯ ಅತ್ಯುತ್ತಮ ಪ್ರೌಢ ಶಾಲಾ ಶಿಕ್ಷಕ ಪ್ರಶಸ್ತಿ ಹಾಗೂ ಗೌರವಧನ ಪ್ರಾಪ್ತಿ.

೨. ದಿನಾಂಕ: ೨೯-೦೬-೧೯೯೭ ರಂದು ಹುಮನಾಬಾದನಲ್ಲಿ ಜರುಗಿದ ತಾಲೂಕಾ ಮಟ್ಟದ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನದ ಗೌರವ ಪ್ರಾಪ್ತಿ.

೩. ೧೯೯೮ ರಲ್ಲಿ ಬೀದರ ಜಿಲ್ಲೆಯಲ್ಲಿ ಆಯೋಜಿಸಿದ ರಾಜ್ಯೋತ್ಸವ ಪ್ರಶಸ್ತಿ.

೪. ೧೯೯೯ ರಲ್ಲಿ "ಯುಗವಾಣಿ" ಪ್ರಬಂಧ ಕಾವ್ಯ ಕೃತಿಗೆ ಗುಲಬರ್ಗಾ ವಿಶ್ವವಿದ್ಯಾಲಯದಿಂದ ವರ್ಷದ ಉತ್ತಮ ಕಾವ್ಯ ಪ್ರಶಸ್ತಿ ಪತ್ರದೊಂದಿಗೆ ರೂ. ೨೦೦೦/– ಗೌರವಧನ ಪ್ರಾಪ್ತಿ.

೫. ೨೦೦೩ ರಲ್ಲಿ ಗ್ರಾಮೀಣ ತಾಂತ್ರಿಕ ವಿಶ್ವವಿದ್ಯಾಲಯ ಭಾಲ್ಕಿಯ ಕನ್ನಡ ಸಂಘದಿಂದ ಸಾಹಿತ್ಯ ಸೇವೆಯ ಪ್ರತಿಭಾ ಪುರಸ್ಕಾರ.

೬. ೨೦೦೪ ರಲ್ಲಿ ಸಾಹಿತ್ಯ ಸೇವೆಗಾಗಿ ಬೀದರ ಸುರಭಿ ಪ್ರಶಸ್ತಿ.

೭. ೨೨-೦೪-೨೦೦೪ ರಂದು ಭಾಲ್ಕಿಯಲ್ಲಿ ಜರುಗಿದ ಲಿಂಗೈಕ್ಯ. ಪೂಜ್ಯ ಶ್ರೀ ಮ.ಘ.ಚ. ಡಾ।। ಚನ್ನಬಸವ ಪಟ್ಟದ್ದೇವರ ನಾಲ್ಕನೇಯ ಶತಮಾನೋತ್ಸವ ಹಾಗೂ ಕಲ್ಯಾಣ ಕರ್ನಾಟಕದ ಬಸವತತ್ವ ಸಮ್ಮೇಳನದಲ್ಲಿ ಸಮಾಜಕ್ಕೆ ಸಲ್ಲಿಸಿದ ಅಪ್ರತಿಮ ಸಾಹಿತ್ಯ ಸೇವೆಯನ್ನು ಗುರುತಿಸಿ ಸನ್ಮಾನ ಹಾಗೂ ಸನ್ಮಾನ ಪತ್ರದೊಂದಿಗೆ ಗೌರವ ಪ್ರಾಪ್ತಿ.

**ವಿವಿಧ ಸಂಘ ಸಂಸ್ಥೆಗಳಲ್ಲಿ ಸೇವೆಃ**

೧. ೧೯೭೦ ರಿಂದ ೧೯೭೩ ರವರೆಗೆ ಹುಮನಾಬಾದ ತಾಲೂಕಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದು, ಸೇವೆ ಸಲ್ಲಿಸಲಾಗಿದೆ.

೨. ೧೯೭೬ ರಿಂದ ೧೯೮೨ ರವರೆಗೆ ಹುಮನಾಬಾದ ಗುರುಭವನ ಸಮಿತಿಯ ಕೋಶಾಧ್ಯಕ್ಷರಾಗಿದ್ದು, ಗುರುಭವನ ನಿರ್ಮಾಣ ಕಾರ್ಯದಲ್ಲಿ ಸಕ್ರಿಯ ಪಾತ್ರ ವಹಿಸಲಾಗಿದೆ.

೩. ೧೯೭೮ ರಿಂದ ೧೯೮೨ ರವರೆಗೆ ಹುಮನಾಬಾದ ತಾಲೂಕಾ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಅಧ್ಯಕ್ಷರಾಗಿ ಸೇವೆ

೪. ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರಿನ ಆಜೀವ ಸದಸ್ಯರಾಗಿದ್ದುಕೊಂಡು ಸಾಹಿತ್ಯ ಸೇವೆ.

೫. ಆಕಾಶವಾಣಿ ಗುಲಬರ್ಗಾದಿಂದ ೬ ಚಿಂತನಗಳ ಪ್ರಸಾರ.

೬. ಆಕಾಶವಾಣಿ ಗುಲಬರ್ಗಾದಿಂದ ಸ್ವರಚಿತ ಕವನಗಳ ವಾಚನ.

೭. ಬೀದರ ಜಿಲ್ಲಾ ೫ನೇ ಮತ್ತು ೬ನೇ ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ ಕ್ರಮವಾಗಿ ಕವಿಗೋಷ್ಠಿ ಹಾಗೂ ಬೀದರ ಜಿಲ್ಲೆಯ ಕನ್ನಡ ಸಾಹಿತ್ಯ ಗೋಷ್ಠಿಗಳ ಉದ್ಘಾಟನೆ.

೮. ಬೀದರ ಜಿಲ್ಲಾಮಟ್ಟದ ವಚನ ಸಾಹಿತ್ಯ ಸಮ್ಮೇಳನದಲ್ಲಿ ಆಧುನಿಕ ವಚನ ಗೋಷ್ಠಿಯ ಉದ್ಘಾಟನೆ.

**ಪ್ರಮುಖ ಆಸಕ್ತಿ ಃ**

ಸಾಹಿತ್ಯಾಧ್ಯಯನ, ಸಾಹಿತ್ಯ ರಚನೆಯ ಜೊತೆಗೆ ಪ್ರಜಾಪಿತಾ ಬ್ರಹ್ಮಕುಮಾರಿ ಈಶ್ವರೀಯ ವಿಶ್ವವಿದ್ಯಾಲಯದ ಆಧ್ಯಾತ್ಮಿಕ ತತ್ವಗಳಲ್ಲಿ ಅಭಿರುಚಿ-ಆಧ್ಯಾತ್ಮಿಕ ಗ್ರಂಥಗಳ ಅಧ್ಯಯನ ಹಾಗೂ ರಾಜಯೋಗ ಶಿಕ್ಷಣದಲ್ಲಿ ಅವಿಚಲ ಆಸೆ.

**ಪರಿವಾರಃ**

| | | |
|---|---|---|
| ಪತ್ನಿ | ಃ | ಸೌ. ಅಯ್ಯಮ್ಮ |
| ಇಬ್ಬರು ಪುತ್ರರು | ಃ | ಈಶ್ವರ ಕಲಬುರ್ಗಿ ಮತ್ತು ವಿರುಪಣ್ಣಾ ಕಲಬುರ್ಗಿ |
| ನಾಲ್ಕು ಪುತ್ರಿಯರು | ಃ | ಸೌ. ಮಂಗಲಾ, ಸೌ. ಸುಜಾತಾ, ಸೌ. ಜಯಶ್ರೀ ಮತ್ತು ಸೌ. ಭಾಗ್ಯಶ್ರೀ |
| ಖಾಯಂ ವಿಳಾಸ | ಃ | ಗಡವಂತಿ ಗ್ರಾಮ ೫೮೫ ೩೫೩. ತಾಃ ಹುಮನಾಬಾದ ಜಿಃ ಬೀದರ. |
| ದೂರವಾಣಿ | ಃ | ೨೭೦೯೮೦, ೨೭೧೬೯ |

# ಗ್ರಂಥ ಋಣ

| ಕ್ರ. ಸಂ. | ಲೇಖಕ/ಸಂಪಾದಕ | ಕೃತಿಗಳು | ಪ್ರಕಾಶನ | ವರ್ಷ |
|---|---|---|---|---|
| ೧ | ರಂ. ಶ್ರೀ ಮುಗುಳಿ | ಕನ್ನಡ ಸಾಹಿತ್ಯ ಚರಿತ್ರೆ | ಗೀತಾ ಬುಕ್ ಹೌಸ್ ಮೈಸೂರು | ೧೯೯೦ |
| ೨ | ಡಾಃ ಬಿ.ವಿ. ಶಿರೂರ | ಸಂಶೋಧನಾ ಸ್ವರೂಪ | ಅನ್ನಪೂರ್ಣ ಪ್ರಕಾಶನ ಹುಬ್ಬಳಿ | ೧೯೯೨ |
| ೩ | ಡಾಃ ಎಂ. ಚಿದಾನಂದ ಮೂರ್ತಿ | ಸಂಶೋಧನೆ | ಕ.ಸಾ.ಪ. ಬೆಂಗಳೂರು | ೧೯೮೪ |
| ೪ | ಡಾಃ ಎಚ್.ತಿಪ್ಪೆರುದ್ರ ಸ್ವಾಮಿ | ಕರ್ನಾಟಕ ಸಂಸ್ಕೃತಿ ಸಮೀಕ್ಷೆ | ಡಿ.ವಿ.ಕೆ. ಮೂರ್ತಿ ಮೆಸೂರು | ೧೯೯೭ |
| ೫ | ಸಂಪಾದಕ ಆರ್.ಸಿ. ಹಿರೇಮಠ | ಬಸವಣ್ಣನವರ ವಚನಗಳು | ಶ್ರೀ ಮುರುಘರಾಜಮಠ ಧಾರವಾಡ | ೧೯೯೮ |
| ೬ | ಕಾಬ್ಸೆ ಜಿ.ಎಸ್. | ಶಾಲ್ಮಲೆಯಿಂದ ಗೋಧಾವರಿಯವರೆಗೆ | ಕ.ಸಾ.ಅ. ಬೆಂಗಳೂರು | ೧೯೮೯ |
| ೭ | ಡಾಃ ಎಂ.ಎಸ್. ಲಠ್ಠೆ | ನಮ್ಮ ಅನುವಾದಕ | ಸಿದ್ಧಲಿಂಗೇಶ್ವರ ಪ್ರಕಾಶನ ಗುಲಬರ್ಗಾ | ೨೦೦೩ |
| ೮ | ಮಹಾಬಲೇಶ್ವರ ರಾವ | ಸಂಶೋಧನಾ ಮಾರ್ಗ | ನವ ಕರ್ನಾಟಕ ಪ್ರಕಾಶನ ಬೆಂಗಳೂರು | ೧೯೯೬ |
| ೯ | ಡಾಃ ಹರಿಕೃಷ್ಣ ಭರಣ್ಯ | ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ | ಪ್ರಭಸ ಮಧುಕೈ | ೧೯೯೦ |
| ೧೦ | ಡಾ. ಎಚ್.ಜಿ. ಲಕ್ಕಪ್ಪಗೌಡ | ಜಾನಪದ ಕೈಪಿಡಿ | ಕರ್ನಾಟಕ ಪುಸ್ತಕ ಪ್ರಾಧಿಕಾರ ಬೆಂಗಳೂರು | ೧೯೯೭ |
| ೧೧ | ಡಾಃ ಕೆ.ಆರ್. ದುರ್ಗಾದಾಸ | ಅನುಸಂಧಾನದ ಹೊಸ ಹಾದಿ | ಸಮತಾ ಪ್ರಕಾಶನ ಧಾರವಾಡ | ೨೦೦೦ |

| | | | | |
|---|---|---|---|---|
| ೧೨ | ಕ.ರಾಮು.ಮಂಡಳಿ | ಸಮಾಜ ಶಾಸ್ತ್ರದ ಮೂಲ ತತ್ವಗಳು | ಕ.ರಾಮು.ವಿ ಮೈಸೂರು | ೨೦೦೦ |
| ೧೩ | ಸಂ. ಡಾ಼ ಜಗನ್ನಾಥ ಹೆಬ್ಬಾಳೆ | ಬೀದರ ಜಿಲ್ಲಾದರ್ಶನ | ಜಿಲ್ಲಾ ಕ.ಸಾ.ಪ. ಬೀದರ | ೧೯೯೭ |
| ೧೪ | ರಾಜಪ್ಪಾ ದಳವಾಯಿ | ಕನ್ನಡ ಸಾಹಿತ್ಯ ವಿಶ್ವಕೋಶ | ಬೆಂಗಳೂರು ಪ್ರಕಾಶನ | ೧೯೯೬ |
| ೧೫ | ಬಸವರಾಜ ಪೊಲೀಸ್ ಪಾಟೀಲ, ಸ.ಸಂ. ಗವಿಸಿದ್ದ ಹೆಚ್. ಪಾಟೀಲ | ಬಿಡುಗಡೆ | ಅಮರ ಪ್ರಕಾಶನ ಗುಲಬರ್ಗಾ | ೨೦೦೨ |
| ೧೬ | ಸರ್ ಡಾ಼ ಸೋಮನಾಥ ಯಾಳವಾರ, ಸ.ಸಂ. ಡಾ಼ ಪ್ರೇಮಾ ಸಿರ್ಸೆ | ಬೀದರ ಜಿಲ್ಲೆಯ ದರ್ಶನ | ಪ್ರಸಾರ ಗುಲಬರ್ಗಾ | ೨೦೦೫ |
| ೧೭ | ಡಿ.ವಿ.ಜಿ. | ಸಂಸ್ಕೃತಿ | ಕಾವ್ಯಾಲಯ ಮೈಸೂರು | ೧೯೫೬ |
| ೧೮ | ಡಾ಼ ಸೋಮನಾಥ ಯಾಳವಾರ | ಪುಲಿಗೆರೆಯ ಆದಯ್ಯಾ | ಶ್ರೀ ಚೆನ್ನಬಸವೇಶ್ವರ ಪ್ರಕಾಶನ ಹಾರಕೂಡ | ೨೦೦೫ |
| ೧೯. | ಡಾ. ವಿ.ಜಿ. ಪೂಜಾರ | ಸಾಹಿತ್ಯ ಮಾರ್ಗ | ವಿದ್ಯಾನಿಧಿ ಪ್ರಕಾಶನ ಗದಗ | ೧೯೯೩ |
| ೨೦. | ಬಂಡೆಪ್ಪ ಖೂಬಾ | ಅಳುನಗೆಯ ಸುಳಿಯಲ್ಲಿ ಪೆದ್ದಜಿಮ್ಮ | ಸಮರಸ ಪ್ರಕಾಶನ ಗುಲಬರ್ಗಾ | ೧೯೯೫ |
| ೨೧ | -ಅದೇ- | ಐವತ್ತೇಂಟರಲ್ಲಿ ಅನುತ್ತರನ ಪೌರುಷ | ಸಮರಸ ಪ್ರಕಾಶನ ಗುಲಬರ್ಗಾ | ೧೯೯೫ |
| ೨೨. | -ಅದೇ- | ಪುರಸ್ಕಾರ | ಪಾವನ ಪಬ್ಲಿಕೇಶನ್ ಗುಲಬರ್ಗಾ. | ೧೯೯೬ |
| ೨೩. | -ಅದೇ- | ಬಿಂಬ ಪ್ರತಿ ಬಿಂಬ | ಪಾವನ ಪಬ್ಲಿಕೇಶನ್ ಗುಲಬರ್ಗಾ. | ೧೯೯೭ |
| ೨೪. | -ಅದೇ- | ಯುಗವಾಣಿ | ಸರಸ್ವತಿ ಪ್ರಕಾಶನ ಗಡವಂತಿ | ೧೯೯೮ |

| | | | | |
|---|---|---|---|---|
| ೨೫. | -ಅದೇ- | ಶತಕಾಂತ್ಯದ ವಚನ ಶತಕ | ಜಯಸಿಂಹ ಪ್ರಕಾಶನ ಹುಮನಾಬಾದ | ೨೦೦೧ |
| ೨೬. | -ಅದೇ- | ಧರಿನಾಡಿನ ಗಂಡಗಲಿ ರಾಮ | ಸಿದ್ದಲಿಂಗೇಶ್ವರ ಪ್ರಕಾಶನ ಗುಲಬರ್ಗಾ | ೨೦೦೨ |
| ೨೭. | -ಅದೇ- | ವಿಶ್ವ ವಿಖ್ಯಾತ ಬಿದ್ರಿ ಕಲೆ | ಕಲ್ಯಾಣ ಕರ್ನಾಟಕ ಸಂಸ್ಕೃತಿ ಪರಿಚಯ ಗುಲಬರ್ಗಾ. | ೨೦೦೪ |
| ೨೮. | ಡಿ.ವ್ಹಿ.ಜಿ | ಮಂಕುತಿಮ್ಮನ ಕಗ್ಗ | ಮೈಸೂರು | - |
| ೨೯. | ಸಿದ್ದಯ್ಯಾ ಪುರಾಣಿಕ | ವಚನೋಧ್ಯಾನ | ರಾಯಚೂರು | - |
| ೩೦. | ಸಂ. ಬಸವರಾಜ ಸಬರದ | ಕಲಾಗಂಗಾ ಸಂಶೋಧನಾ ಪತ್ರಿಕೆ | ಪ್ರ.ಗು.ವಿ. ಗುಲಬರ್ಗಾ | ಡಿಸೆಂಬರ -೨೦೦೪ |

